ಪ್ರಚಾರ ಪುಸ್ತಕ ಮಾಲೆ

153

# ಶ್ರೀ ಅರವಿಂದರು

ಉ. ಕಾ. ಸುಬ್ಬರಾಯಾಚಾರ್



ಪ್ರಚಾರ ಪುಸ್ತಕಮಾಲೆ–೧೫೩

# ಶ್ರೀ ಅರವಿಂದರು

ಉ. ಕಾ. ಸುಬ್ಬರಾಯಾಚಾರ್




೧೯೮೫

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ, ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ. ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣ ವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು, ಓದಿ, ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನ ವಿಜ್ಞಾನ ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ನೂರೈವತ್ತೆರಡು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷ ವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಉ. ಕಾ. ಸುಬ್ಬರಾಯಾಚಾರ್ ಅವರ 'ಶ್ರೀ ಅರವಿಂದರು' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೧೦–೧೦–೧೯೬೭

ಕೆ. ಎಲ್. ಶ್ರೀಮಾಲಿ
ಕುಲಪತಿ

## ವಿಷಯ ಸೂಚಿಕೆ


| | | ಪುಟ |
| --- | --- | --- |
| ೧. ಪೀಠಿಕೆ | .... | ೧ |
| ೨. ಜೀವನ | .... | ೨ |
| ೩. ಕೃತಿಗಳು | .... | ೧೬ |
| ೪. ಪೂರ್ಣಯೋಗ | .... | ೩೭ |
| ೫. ಶಿಕ್ಷಣ ವಿಚಾರಗಳು | .... | ೪೬ |
| ೬. ಮಾರ್ಗದರ್ಶನ | .... | ೫೩ |
| ೭. ಶ್ರೀ ಅರವಿಂದಾಶ್ರಮ | .... | ೫೮ |
| ೮. ಉಪಸಂಹಾರ | .... | ೬೨ |

# ೧. ಪೀಠಿಕೆ

ಆಹಾರ ವಸತಿಗಳ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಭಾರತೀಯರ ಶಕ್ತಿಯ ಬಹುಭಾಗ ಇಂದು ವ್ಯಯವಾಗುತ್ತಿದೆ. ಆರ್ಥಿಕ ಮುಗ್ಗಟ್ಟಿನಿಂದ ಜನರ ಉತ್ಸಾಹ ಕುಗ್ಗುತ್ತಿದೆ. ಅಕ್ಕಿ, ಗೋಧಿ, ಸಕ್ಕರೆ, ಜೋಳ, ರಾಗಿ—ಇವುಗಳಿಗಾಗಿ ಜನರು ಅಲೆಯುವ ಪಾಡು ಬಂದಿದೆ. ದೇಶದಲ್ಲಿ ಒಂದು ಸಮಸ್ಯೆಯನ್ನು ಪರಿಹರಿಸಲು ಯತ್ನಿಸಿದರೆ ಮತ್ತೊಂದು ಸಮಸ್ಯೆ ತಲೆದೋರುತ್ತಿದೆ. ಸ್ವಾತಂತ್ರ್ಯ ಬಂದೊಡನೆ ಭಾರತವು ಭೂಸ್ವರ್ಗವಾಗುವದೆಂದು ಭಾವಿಸಿದ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿ ಹಲವು ವರ್ಷಗಳಾದರೂ ಸುಖವೆಂಬುದು ಗಗನಕುಸುಮವಾಗಿದೆ. ಚೀಣೀಯರ ಆಕ್ರಮಣ, ಪಾಕಿಸ್ಥಾನದೊಡನೆ ಯುದ್ಧ, ರಾಜಕೀಯ ಗುಂಪುಗಳು, ಕಾರ್ಮಿಕರ ಸಂಪು, ಗಡಿ ವಿವಾದ, ವಿದ್ಯಾರ್ಥಿಗಳಲ್ಲಿ ಅಶಿಸ್ತು, ಆಹಾರದ ಅಭಾವ, ಹಣದ ಉಬ್ಬರ—ಮೊದಲಾದ ಅನೇಕ ಸಮಸ್ಯೆಗಳು ಭೂತಾಕಾರವಾಗಿ ಮೇಲೆದ್ದು ರಾಷ್ಟ್ರಕ್ಕೆ ದಾರಿಗಾಣದೆ ಮಂಕು ಕವಿದಂತಾಗಿದೆ. ಇದಕ್ಕೆ ಪರಿಹಾರವೇನು?

ಸಮಸ್ಯೆಗಳ ಪರಿಹಾರಕ್ಕೆ ಹಲವರು ಹಲವು ರೀತಿಯ ಮಾರ್ಗದರ್ಶನ ಮಾಡಿದ್ದಾರೆ. ಶ್ರೀ ಅರವಿಂದರು ಜೀವನದ ಸಮಸ್ಯೆಗಳನ್ನು ಕೇವಲ ರಾಜಕೀಯ ಸಾಮಾಜಿಕ ಆರ್ಥಿಕ ರೀತಿಯಿಂದ ಪರಿಹರಿಸಿದರೆ ಸಾಲದು, ಸಮಸ್ಯೆಗಳನ್ನು ಕೇವಲ ಬುದ್ಧಿಶಕ್ತಿಯಿಂದಲೇ ಪರಿಹರಿಸುವುದು ಸಾಧ್ಯವಿಲ್ಲ. ಆತ್ಮಶಕ್ತಿಯಿಂದ ಪರಿಹರಿಸುವ ಆವಶ್ಯಕತೆ ಇದೆ—ಎಂದು ಹೇಳಿದರು. ಬುದ್ಧಿಶಕ್ತಿಗೆ ಕೆಲವು ಸಮಸ್ಯೆಗಳನ್ನು ಪರಿಹರಿಸುವ ಶಕ್ತಿ ಇದೆ. ಜಗತ್ತಿನಲ್ಲಿ ಇದುವರೆಗೆ ಹೆಚ್ಚಾಗಿ ಹಾಗೆಯೇ ನಡೆದದ್ದು.

ಆದರೆ ಮನುಷ್ಯನ ಮೂಲಭೂತವಾದ ಸಮಸ್ಯೆಗಳನ್ನು ಪರಿಹರಿಸಲು ಅದು ಅಸಮರ್ಥವಾಗಿದೆ. ರಾಜಕೀಯ ಸ್ವಾತಂತ್ರ್ಯವೆಂಬುದು ಅತ್ಯಂತ ಆವಶ್ಯಕವಾದ ಪ್ರಾಥಮಿಕ ಘಟ್ಟ, ಪ್ರತಿಭೆ ಅರಳುವುದೂ ಉತ್ತಮ ವಾತಾವರಣ ಏರ್ಪಡುವುದೂ ಸ್ವತಂತ್ರ ರಾಷ್ಟ್ರದಲ್ಲಿಯೆ. ಸಮಾಜಸುಧಾರಣೆಯ ಯೋಜನೆಗಳಂತಹ ಕಾರ್ಯಗಳೊಡನೆ ಮಾನವ ಸ್ವಭಾವದ ಪರಿಷ್ಕರಣವೂ ಆವಶ್ಯಕ. ಮಾನಸದಲ್ಲಿ ವ್ಯವಹರಿಸುವ ಜೀವಿ ಅಧಿಮಾನಸಚೇತ್ರಕ್ಕೆ ಏರಿದಾಗಲೇ ಶಾಂತಿ, ತುಷ್ಟಿ, ಐಶ್ವರ್ಯಗಳು ಜಗತ್ತಿನಲ್ಲಿ ನೆಲಸುವುದು. ಸಮಸ್ತ ಮಾನವಕುಲವೇ ಈ ಮಹತ್ಸಾಧನೆಯಲ್ಲಿ ತೊಡಗಬೇಕು. ಜನರು ಯಾವ ಕ್ಷೇತ್ರದಲ್ಲಿದ್ದರೂ ಈ ಸಾಧನೆಯನ್ನು ಕೈಗೊಳ್ಳಬಹುದೆಂಬ ಆಶ್ವಾಸನೆ ಶ್ರೀ ಅರವಿಂದರದು. ಅವರ ಜೀವನ, ಕೃತಿಗಳು, ಪೂರ್ಣಯೋಗ ಹಾಗೂ ಅವರ ವಿಚಾರಧಾರೆಯ ಸಂಕ್ಷಿಪ್ತ ಪರಿಚಯವನ್ನು ಮುಂದೆ ನಿರೂಪಿಸಿದೆ.

## ೨. ಜೀವನ

ಪುಣ್ಯಭೂಮಿಯಾದ ಭಾರತ ಅಧ್ಯಾತ್ಮದ ನೆಲೆವೀಡು. ಆತ್ಮದ ಅನಂತ ಶಕ್ತಿಯ ಅಪಾರ ವೈಭವವನ್ನು ಪ್ರಾಚೀನಕಾಲದಿಂದಲೂ ಸಾರುತ್ತ ಬಂದಿದೆ ಸನಾತನ ಭಾರತ. ಇಲ್ಲಿ ರಾಮ, ಕೃಷ್ಣ, ಬುದ್ಧ, ಶಂಕರ, ರಾಮಾನುಜ, ಮಧ್ವ, ರಾಮಕೃಷ್ಣ ಪರಮಹಂಸ, ರಮಣ ಮಹರ್ಷಿ ಮೊದಲಾದ ಜ್ಯೋತಿಪುರುಷರು ಜನ್ಮತಾಳಿ ಜ್ಯೋತಿ-ಪಥವನ್ನು ತೋರಿದರು. ಪ್ರಾಚ್ಯ ಮತ್ತು ಪಾಶ್ಚಿಮಾತ್ಯ ದರ್ಶನಗಳನ್ನು ಅರಿತು, ಸಮನ್ವಯ ಸರ್ವೋ

ದಯ ಪೂರ್ಣದೃಷ್ಟಿಗಳಿಂದ ಮೂರ್ತಗೊಂಡ ಯೋಗಪಥವನ್ನು ಜಗತ್ತಿಗೆ ನೀಡಿದ ಮಹಾಯೋಗಿ ಶ್ರೀ ಅರವಿಂದರು.

ಖ್ಯಾತ ವೈದ್ಯರಾದ ಶ್ರೀಕೃಷ್ಣಧನಘೋಷರ ಪತ್ನಿ ಶ್ರೀಮತಿ ಸ್ವರ್ಣಲತಾದೇವಿ, ೧೮೭೨ ಆಗಸ್ಟ್ ೧೫ನೆ ದಿನ ಪ್ರಾತಃಕಾಲ ಕಲ್ಕತ್ತ ನಗರದಲ್ಲಿ ಗಂಡು ಶಿಶುವಿಗೆ ಜನ್ಮವಿತ್ತರು. ಈ ಶಿಶುವೇ ಮುಂದೆ ಶ್ರೀ ಅರವಿಂದ ಮಹರ್ಷಿ ಎಂದು ಖ್ಯಾತನಾದುದು. ಅರವಿಂದರಿಗೆ ವಿನಯಭೂಷಣ, ಮನಮೋಹನ ಎಂಬ ಅಣ್ಣಂದಿರಿದ್ದರು. ಅರವಿಂದರ ಬಳಿಕ ಹುಟ್ಟಿದವರು ಸರೋಜಿನಿ ಎಂಬ ಸಹೋದರಿ ಮತ್ತು ಬರೀಂದ್ರಕುಮಾರ ಎಂಬ ತಮ್ಮ. ಐದು ವರ್ಷ ವಯಸ್ಸಿನ ಅರವಿಂದರಿಗೆ ಡಾರ್ಜಿಲಿಂಗಿನ ಇಂಗ್ಲಿಷ್ ಶಾಲೆಯಲ್ಲಿ ವಿದ್ಯಾಭ್ಯಾಸ ಆರಂಭವಾಯಿತು. ಅಲ್ಲಿ ನಡೆದುದು ಕೇವಲ ಎರಡು ವರ್ಷಗಳ ವಿದ್ಯಾಭ್ಯಾಸ.

### ಇಂಗ್ಲೆಂಡ್

ಪಾಶ್ಚಿಮಾತ್ಯ ಸಂಸ್ಕೃತಿಯ ಆರಾಧಕರಾದ ಕೃಷ್ಣಧನ ಘೋಷರು ೧೮೭೯ ರಲ್ಲಿ ವಿನಯಭೂಷಣ, ಮನಮೋಹನ, ಅರವಿಂದ–ಈ ಮೂರು ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಕರೆದುಕೊಂಡು ಹೋಗಿ ಅಲ್ಲಿಯೇ ಬಿಟ್ಟರು. ೧೮೭೯ರಿಂದ ೧೮೯೩ರ ವರೆಗೆ ಹದಿನಾಲ್ಕು ವರ್ಷಗಳ ಕಾಲ ಮ್ಯಾಂಚೆಸ್ಟರ್, ಲಂಡನ್, ಕೇಂಬ್ರಿಡ್ಜ್‌ಗಳಲ್ಲಿ ಅರವಿಂದರು ಅಧ್ಯಯನ ಮಾಡಿದರು ಲ್ಯಾಟಿನ್, ಗ್ರೀಕ್ ಭಾಷೆಗಳಲ್ಲಿ ಅವರಿಗೆ ಅದ್ವಿತೀಯ ಪಾಂಡಿತ್ಯ ಲಭಿಸಿತು, ಪ್ರಥಮಶ್ರೇಣಿಯಲ್ಲಿ ತೇರ್ಗಡೆಯಾದರು. ತಂದೆಯವರಿಂದ ಸಕಾಲದಲ್ಲಿ ಧನ ಸಂಪತ್ತಿಯ ನೆರವಿಲ್ಲದೆ ಅವರು ಕಷ್ಟಪಡಬೇಕಾಯಿತು. ಸಂಸಾರದ

ಕಷ್ಟಕ್ಕೆ ಸಿಕ್ಕಿದ ಕೃಷ್ಣಧನಘೋಷರು ಮಕ್ಕಳಿಗೆ ಸಾಕಷ್ಟು ಹಣವನ್ನು ಕಳುಹಿಸಲಾರದ ಪರಿಸ್ಥಿತಿಗೆ ಬಂದಿದ್ದರು. ಪ್ರತಿಭಾನ್ವಿತರಾದ ಅರವಿಂದರಿಗೆ ಸಾಹಿತ್ಯದಲ್ಲಿ ಬಟರ್‌ವರ್ತ್ ಬಹುಮಾನವೂ, ಚರಿತ್ರೆಯಲ್ಲಿ ಬೆಡ್‌ಫರ್ಡ್ ಬಹುಮಾನವೂ ಲಭಿಸಿದವು. ವಿದ್ಯಾರ್ಥಿವೇತನ ಅವರಿಗೆ ಲಭಿಸಿದುದರಿಂದ ವಿದ್ಯಾಭ್ಯಾಸ ನಡೆಯಲು ಅನುಕೂಲವಾಯಿತು. ಅರವಿಂದರು ತಮ್ಮ ವಿದ್ಯಾರ್ಥಿವೇತನದಿಂದ ಬರುತ್ತಿದ್ದ ಧನದಿಂದ ತಮ್ಮ ಅಣ್ಣಂದಿರನ್ನೂ ಅವರು ನೋಡಿಕೊಳ್ಳಬೇಕಾಗಿತ್ತು. ಯುಕ್ತವಾದ ಆಹಾರ ಹಾಗೂ ಯುಕ್ತವಾದ ಉಡುಪಿನ ಅಭಾವವಿದ್ದರೂ ಅರವಿಂದರ ಅಧ್ಯಯನದ ನಿಷ್ಠೆ ಕುಂದಲಿಲ್ಲ. ತಂದೆಯವರ ಅಭಿಲಾಷೆಯಂತೆ ಅವರು ಐ.ಎ.ಎಸ್. ಪರೀಕ್ಷೆಗೆ ಅಧ್ಯಯನ ಮಾಡಿ ಅದರಲ್ಲಿ ತೇರ್ಗಡೆಯಾದರು. ಆದರೆ ಕುದುರೆ ಸವಾರಿಯ ಪರೀಕ್ಷೆಗೆ ಅವರು ಹೋಗದಿದ್ದುದರಿಂದ ಅವರು ಐ.ಎ.ಎಸ್. ಪದವಿಗೆ ಅನರ್ಹರಾದರು. ಇದನ್ನು ಕೇಳಿದ ಕೃಷ್ಣಧನಘೋಷರು ತುಂಬ ನೊಂದುಕೊಂಡರು.

## ಬರೋಡ

ಇಂಗ್ಲೆಂಡಿನಲ್ಲಿದ್ದ ಗಾಯಕವಾಡದ ಮಹಾರಾಜರು ತಮ್ಮ ಸರ್ಕಾರದಲ್ಲಿ ,ಕೆಲಸಮಾಡಬೇಕೆಂದು ೧೮೯೩ರಲ್ಲಿ ಅರವಿಂದರನ್ನು ಆಹ್ವಾನಿಸಿದರು. ಅರವಿಂದರ ಮಿತ್ರರಾದ ಜೇಮ್ಸ್ ಎಸ್. ಕಾಟನ್ ಅವರು, ಆ ಆಹ್ವಾನವನ್ನು ಒಪ್ಪಿ ಭಾರತಕ್ಕೆ ಹೋಗುವುದು ಉತ್ತಮವೆಂದು ಸೂಚಿಸಿದ್ದರಿಂದ ಅರವಿಂದರು ಒಪ್ಪಿ ಭಾರತಕ್ಕೆ ಹೊರಟರು. ಅವರು ಜಹಜಿನಿಂದ ಇಳಿದು ಭರತಮಾತೆಯ ಪವಿತ್ರ ಭೂಮಿಯ ಸ್ಪರ್ಶವಾದೊಡನೆ

ಆಧ್ಯಾತ್ಮಿಕ ಶಾಂತಿ ಅವರನ್ನು ಆಕ್ರಮಿಸಿತು. ೧೮೯೩ನೆ ಫೆಬ್ರವರಿ ೨ನೆ ದಿನ ಅವರು ಬರೋಡ ಸೇರಿದರು. ಕೆಲವು ಕಾಲ ಸರ್ಕಾರದ ನೌಕರಿಯಲ್ಲಿದ್ದು, ಕಡೆಗೆ ಅವರು ಬರೋಡ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕರಾದರು. ಈ ಕೆಲಸದ ಜೊತೆಗೆ ಅವರು ಮಹಾರಾಜರ ಆಪ್ತ ಕಾರ್ಯದರ್ಶಿಯಾಗಿಯೂ ಕೆಲಸಮಾಡ ಬೇಕಾಯಿತು. ಈ ಸಮಯದಲ್ಲಿ ಅವರ ತಂದೆ ಕೃಷ್ಣಧನ ಘೋಷರು ಕಾಲವಾಗಲು ಅರವಿಂದರು ಬಂಗಾಳದಲ್ಲಿದ್ದ ವಿಧವೆ ಯಾದ ತಾಯಿಯನ್ನೂ ತಂಗಿ ಸರೋಜಿನಿ ಮತ್ತು ತಮ್ಮ ಬರೀಂದ್ರರನ್ನೂ ಕಂಡು ಅವರ ಜೀವನ ನಿರ್ವಹಣಕ್ಕೆ ತಕ್ಕ ವ್ಯವಸ್ಥೆ ಮಾಡಿ ಬರೋಡಕ್ಕೆ ಹಿಂತಿರುಗಿದರು.

ತಮ್ಮ ಮಾತೃಭಾಷೆಯಾದ ಬಂಗಾಳಿಯನ್ನು ಕಲಿತು, ಬಂಕಿಮಚಂದ್ರ, ಮಧುಸೂದನದತ್ತ, ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ್ ಮೊದಲಾದವರ ಕೃತಿಗಳನ್ನು ಮೂಲ ದಲ್ಲಿಯೇ ಅಧ್ಯಯನ ಮಾಡಿದರು. ಸ್ವಾಮಿ ವಿವೇಕಾನಂದರ ಕೃತಿಗಳ ರಸಾಸ್ವಾದನ ಮಾಡಿ ಅದರಿಂದ ಸ್ಫೂರ್ತಿ ಪಡೆದ ಅರವಿಂದರು, ಸ್ವಾಮಿಜಿಯ ಭಾಷೆಯ ಶಕ್ತಿ, ಝುಂಕಾರ ಗಾಂಭೀರ್ಯಗಳನ್ನು ಇತರೆಡೆ ಸಂದರ್ಶಿಸುವುದು ದುರ್ಲಭ ವೆಂದರು. ಸಂಸ್ಕೃತ, ಮರಾಠಿ, ಗುಜರಾತಿ ಭಾಷೆಗಳಲ್ಲಿಯೂ ಅವರು ಪ್ರಭುತ್ವವನ್ನು ಪಡೆಯಲು ಯತ್ನಿಸಿದರು. ತತ್ತ್ವ ಶಾಸ್ತ್ರವನ್ನೂ ಅವರು ಅಧ್ಯಯನ ಮಾಡಿದರು. ಆದರೆ ಕೇವಲ ತತ್ತ್ವಶಾಸ್ತ್ರದ ಬಣಪಾಂಡಿತ್ಯವನ್ನು ಪಡೆಯುವುದಕ್ಕಾಗಿ ಅವರು ಯತ್ನಿಸಲಿಲ್ಲ; ಜೀವನೋಪಯುಕ್ತವಾದ ದರ್ಶನಕ್ಕಾಗಿ ಅವರು ಹುಡುಕುತ್ತಿದ್ದರು. ಅವರ ದೃಷ್ಟಿಯಮೇಲೆ ತುಂಬ ಪ್ರಭಾವ ಬೀರಿದ ಮೊದಲ ಕೃತಿ, ಶ್ರೀ ರಾಮಕೃಷ್ಣ ಪರಮಹಂಸರ ವಚನಾ

ವೃತ. ರಾಮಕೃಷ್ಣಪರಮಹಂಸರು ಮತ್ತು ಸ್ವಾಮಿ ವಿವೇಕಾನಂದರಲ್ಲಿ ಅವರಿಗೆ ಪ್ರಗಾಢ ಭಕ್ತಿ ಬೆಳೆಯಿತು. ಕ್ರಮೇಣ ಅವರ ದೃಷ್ಟಿ ಭಾರತೀಯ ಸಂಸ್ಕೃತಿ ಹಾಗೂ ಭಾರತೀಯ ಕವಿಗಳತ್ತ ಹರಿಯಿತು. ಭರ್ತೃಹರಿಯ 'ನೀತಿಶತಕ', ಕಾಳಿದಾಸನ 'ವಿಕ್ರಮೋರ್ವಶೀಯ' ಮತ್ತು 'ಋತುಸಂಹಾರ' ಮೊದಲಾದ ಸಂಸ್ಕೃತ ಕೃತಿಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿದರು. ವ್ಯಾಸಭಾರತ ಮತ್ತು ವಾಲ್ಮೀಕಿ ರಾಮಾಯಣಗಳ ಕೆಲವು ಭಾಗಗಳನ್ನೂ ಅವರು ಭಾಷಾಂತರ ಮಾಡಿದರು. ಪ್ರಾಚೀನ ಭಾರತದ ಮಹಾಋಷಿಗಳೂ ಮಹಾಕವಿಗಳೂ ಅವರ ಮೇಲೆ ತುಂಬ ಪ್ರಭಾವ ಬೀರುವುದು ಮಾತ್ರವಲ್ಲದೆ, ಅವರ ಜೀವನವನ್ನು ರೂಪಿಸುವ ಮಹಾಶಕ್ತಿಗಳೂ ಆದರು.

ವಿದ್ಯಾಭ್ಯಾಸದೊಡನೆ ಕ್ರಿಯಾಶಕ್ತಿಯೂ ಸೇರಿಕೊಳ್ಳಬೇಕೆಂಬುದನ್ನು ಅರವಿಂದರು ಅರಿತು, ಭಾರತದಲ್ಲಿ ದೈಹಿಕ, ಮಾನಸಿಕ, ನೈತಿಕ, ಆಧ್ಯಾತ್ಮಿಕ ಶಕ್ತಿಗಳೊಡನೆ ಪ್ರಚಂಡ ಕ್ರಿಯಾಶಕ್ತಿಯನ್ನು ಮೂಡಿಸುವ ಮಹತ್ಕಾರ್ಯವನ್ನು ಸಾಧಿಸಬೇಕೆಂಬ ಸಂಕಲ್ಪ ಮಾಡಿದರು. ನವಭಾರತದ ನಿರ್ಮಾಣಕ್ಕೆ ಜ್ಞಾನಭಕ್ತಿಗಳೊಡನೆ ಕರ್ಮಶ್ರದ್ಧೆಯ ಉದಯವಾಗಬೇಕೆಂದು ಅವರು ಘೋಷಿಸಿದರು. ಭಾರತದ ಅಭ್ಯುದಯಕ್ಕೆ ನವಹೃದಯದಿಂದ ಕೂಡಿದ ನವಮಾನವರು ಶಕ್ತಿದೇವತೆಯಾದ ಭವಾನಿಯ ಉಪಾಸನೆ ಮಾಡಬೇಕೆಂಬುದನ್ನು ಸ್ಪಷ್ಟಪಡಿಸಿದರು.

ಅರವಿಂದರು ಭೂಪಾಲಚಂದ್ರ ಬೋಸರ ಪುತ್ರಿ ಮೃಣಾಲಿನಿ ಎಂಬ ೧೪ ವರ್ಷದ ಕನ್ಯೆಯನ್ನು ಅವರು ವಿವಾಹವಾದುದು ೧೯೦೧ರಲ್ಲಿ. ಅವರಿಗೆ ಆಗ ೨೯ ವರ್ಷ ವಯಸ್ಸಾಗಿತ್ತು. ಮದುವೆಯಾದ ಕೆಲವು ಕಾಲ ಮಾತ್ರ ಅವರು ಪತ್ನಿಯೊಡನಿದ್ದರು.

ಬಳಿಕ ಅವರು ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ತಮ್ಮ ಶಕ್ತಿಯನ್ನು ಸಮರ್ಪಿಸಲು ಸಿದ್ಧರಾದರು. ಬರೋಡ ಕಾಲೇಜಿನಲ್ಲಿ ಪ್ರಾಧ್ಯಾಪಕರಾದ ಅರವಿಂದರು ಪ್ರಿನ್ಸಿಪಾಲ್ ಪದವಿಗೇರಿದಾಗ ಅವರಿಗೆ ಬರುತ್ತಿದ್ದ ಮಾಸಿಕವೇತನ ೭೧೦ ರೂಪಾಯಿಗಳು. ೧೯೦೬ರಲ್ಲಿ ಆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಕಲ್ಕತ್ತೆಯ ರಾಷ್ಟ್ರೀಯ ಕಾಲೇಜಿನ ಪ್ರಿನ್ಸಿಪಾಲರಾದರು, ಕೇವಲ ೧೫೦ ರೂಪಾಯಿಗಳ ವೇತನಕ್ಕೆ! ಈ ತ್ಯಾಗಕ್ಕೆ ಅವರ ಹೃದಯದಲ್ಲಿ ಮೂಡಿದ ದೇಶಪ್ರೇಮವೇ ಪ್ರಬಲ ಕಾರಣ.

### ರಾಜಕೀಯ ಕ್ಷೇತ್ರ

ಕಲ್ಕತ್ತೆಯಲ್ಲಿ ನೆಲಸಿದ ಕೆಲವು ದಿನಗಳಲ್ಲಿ ಅಂದರೆ ೧೯೦೬ರ ಏಪ್ರಿಲ್ ೧೪ರಂದು ಬಾರಿಸಾಲಿನಲ್ಲಿ ನಡೆದ ರಾಷ್ಟ್ರೀಯ ಸಮ್ಮೇಳನದಲ್ಲಿ ಅರವಿಂದರು ಭಾಗವಹಿಸಿದರು. ಅದು ನ್ಯಾಯಬಾಹಿರವೆಂದು ಬ್ರಿಟಿಷ್ ಸರ್ಕಾರ ಘೋಷಿಸಿತು; ಅಷ್ಟೇ ಅಲ್ಲದೆ, ಅಲ್ಲಿ ನೆರೆದಿದ್ದ ಜನರನ್ನು ಲಾಠಿಪ್ರಹಾರ ಮಾಡಿ ಚದುರಿಸಿತು. ಆ ಹಿಂಸಾಕೃತ್ಯವನ್ನು ಕಂಡ ಅರವಿಂದರು, ಭಾರತದಲ್ಲಿ ಶಕ್ತಿಯ ಆವಿರ್ಭಾವವಾಗದ ಹೊರತು ಭಾರತಕ್ಕೆ ಸ್ವಾತಂತ್ರ್ಯ ಲಭಿಸದೆಂದು ಸಾರಿದರು. ೧೯೦೬, ಡಿಸೆಂಬರ್ ೨೬ರಲ್ಲಿ ನಡೆದ ಕಾಂಗ್ರೆಸ್ ಸಮ್ಮೇಳನದಲ್ಲಿ ಅವರು ಭಾಗವಹಿಸಿ, ಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸಿನ ಧ್ಯೇಯವೆಂದು ನಿರ್ಣಯ ಮಾಡಲು ಅವರು ಕಾರಣರಾದರು. ಅಂದಿನಿಂದ ಭಾರತಕ್ಕೆ ಸ್ವಾತಂತ್ರ್ಯ ಬರುವವರೆಗೆ ಕಾಂಗ್ರೆಸ್ಸಿನ ಧ್ಯೇಯ ಅದೇ ಆಗಿತ್ತು.

ಕ್ರಾಂತಿಕಾರಕ ಭಾವನೆಯುಳ್ಳ ಅರವಿಂದರ ಸಹೋದರ ಬರೀಂದ್ರನು ಅವರ ಅನುಯಾಯಿಯಾಗಿ ಅವರೊಡನೆ ಸೇರಿದನು.

೧೯೦೭ರ ಡಿಸೆಂಬರ್ ತಿಂಗಳಲ್ಲಿ ಅರವಿಂದರು ಬೊಂಬಾಯಿ ಪ್ರಾಂತ್ಯದಲ್ಲಿ ಅಲ್ಲಲ್ಲಿ ಭಾಷಣ ಮಾಡಿ, ಉಜ್ವಲ ದೇಶಭಕ್ತಿ ಜನರ ಹೃದಯದಲ್ಲಿ ಮೂಡುವಂತೆ ಮಾಡಿದರು. ಬೊಂಬಾಯಿ ಪ್ರಾಂತದಿಂದ ಬರೋಡಕ್ಕೆ ಹೋದಾಗ, ಅಲ್ಲಿ ವಿಷ್ಣು ಭಾಸ್ಕರ ಲೇಲೆ ಎಂಬ ಯೋಗಿವರ್ಯರ ಸಂದರ್ಶನ ಅವರಿಗಾಯಿತು. ಅವರ ಬಳಿ ಕೆಲವು ಕಾಲ ಪ್ರಾಣಾಯಾಮ ಮೊದಲಾದ ಯೋಗಸಾಧನೆಗಳನ್ನು ಮಾಡಿ, ವಿಶೇಷ ಅನುಭವವನ್ನು ಅವರು ಪಡೆದರು. ಆದರ ಫಲವಾಗಿ ಅವರಲ್ಲಿ ಹೊಸಚೈತನ್ಯ ಮೂಡಿತು. ಈ ಜಗತ್ತು ಈಶ್ವರನ ಭೂಮಿಕೆಯೆಂಬುದು ಸ್ಪಷ್ಟವಾಯಿತು. ಭರತಮಾತೆ ಅವರಿಗೆ ಸಾಕ್ಷಾತ್ ರಾಜೇಶ್ವರಿಯಾಗಿ ಕಾಣಿಸಿದಳು. ಆ ಮಹಾಮಾತೆಯ ಬಿಡುಗಡೆಗೆ ಬ್ರಹ್ಮತೇಜಸ್ಸಿನಿಂದ ಸಾಧನೆ ಮಾಡುವ ಸಂಕಲ್ಪ ಅವರದಾಯಿತು. “ಹೇ ಜಗಜ್ಜನನಿ, ನನಗೆ ಮುಕ್ತಿ ಬೇಡ, ಸುಖ ಬೇಡ, ದೇಶದ ಸ್ವಾತಂತ್ರ್ಯಕ್ಕಾಗಿ ದುಡಿವ ಶಕ್ತಿಯನ್ನು ನೀಡು” ಎಂದು ಅವರು ಪ್ರಾರ್ಥಿಸಿದರು.

ವಿಪಿನಚಂದ್ರಪಾಲರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ‘ವಂದೇ ಮಾತರಂ’ ಇಂಗ್ಲಿಷ್ ವಾರಪತ್ರಿಕೆಯಲ್ಲಿ ಅರವಿಂದರು ತೇಜೋಪೂರ್ಣವಾದ ಲೇಖನಗಳನ್ನು ಬರೆದು ಯುವಕರನ್ನು ಸ್ವಾತಂತ್ರ್ಯ ಸಮರಕ್ಕೆ ಸಿದ್ಧಮಾಡಿದರು. ಇದರ ಫಲವಾಗಿ ಕಲ್ಕತ್ತೆಯಲ್ಲಿ ಮಾತ್ರವಲ್ಲದೆ ಅಖಂಡ ಭಾರತದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಉಗ್ರರೂಪಕ್ಕೆ ತಿರುಗಿತು. ಅದನ್ನು ಕಂಡ ಬ್ರಿಟಿಷ್ ಸರ್ಕಾರ ‘ವಂದೇ ಮಾತರಂ’ ಪತ್ರಿಕೆಯ ಸಂಪಾದಕರನ್ನು ಕಾರಾಗೃಹಕ್ಕೆ ಕಳುಹಿಸಿತು. ಅರವಿಂದರನ್ನೂ ರಾಜದ್ರೋಹದ ಅಪಾದನೆಯ ಕಾರಣವಾಗಿ ಸೆರೆಮನೆಗೆ ಕಳುಹಿಸಿತು. ಆದರೆ ತನ್ನ ಆಪಾದನೆಯನ್ನು ಪೂರ್ಣವಾಗಿ ಸಮರ್ಥನೆ ಮಾಡಲಾರದೆ,

ಸರ್ಕಾರ ಅವರನ್ನು ಸೆರೆಮನೆಯಿಂದ ಬಿಟ್ಟುಬಿಟ್ಟಿತು. ಕೆಲವು ಸಮಯದ ಬಳಿಕ ಮ್ಯಾಜಿಸ್ಟ್ರೇಟರಾದ ಕಿಂಗ್‌ಫರ್ಡರನ್ನು ಕೊಲೆ ಮಾಡಲು ಕ್ರಾಂತಿಕಾರರು ಎಸೆದ ಬಾಂಬು ನಿರಪರಾಧಿಗಳನ್ನು ಬಲಿತೆಗೆದುಕೊಂಡಿತು. ಅರವಿಂದರ ಸಹೋದರ ಬರೀಂದ್ರ ಕುಮಾರ ಮತ್ತು ಇತರರನ್ನು ಸರ್ಕಾರ ದಸ್ತಗಿರಿ ಮಾಡಿತು. ಅರವಿಂದರನ್ನೂ ಸರ್ಕಾರ ಸೆರೆಮನೆಗೆ ಕಳುಹಿಸಿತು. ಅವರು ೧೯೦೮ನೆ ಮೇ ತಿಂಗಳ ೪ನೇ ತಾರೀಖಿನಿಂದ ಸುಮಾರು ಒಂದು ವರ್ಷಕಾಲ ಸೆರೆಮನೆಯಲ್ಲಿರಬೇಕಾಯಿತು. ಅವರು ಸೆರೆಮನೆಯನ್ನು ಆಶ್ರಮವಾಸವಾಗಿ ಪರಿವರ್ತಿಸಿದರು. ಅವರ ಯೋಗ ಸಾಧನೆಯ ಫಲವಾಗಿ "ಸರ್ವಂ ಖಲ್ವಿದಂ ಬ್ರಹ್ಮ" ಎಂಬುದರ ಅನುಭೂತಿಯಾಯಿತು. ಉಪನಿಷತ್ತು, ವೇದ, ಗೀತೆಗಳ ಅಧ್ಯಯನವನ್ನು ಸೆರೆಮನೆಯಲ್ಲಿ ಅವರು ಆರಂಭಿಸಿದರು. ಸೆರೆಮನೆಯಲ್ಲಿ ಅವರು ಧ್ಯಾನಕ್ಕೆ ಕುಳಿತಾಗ ಸ್ವಾಮಿ ವಿವೇಕಾನಂದರ ದಿವ್ಯಸಂದೇಶ ಕೇಳಲಾರಂಭಿಸಿತು. ಅರವಿಂದರು ಅಂತರ್ಮುಖಿ ಜೀವನ ನಡೆಸುತ್ತ ಬಾಹ್ಯವನ್ನು ಮರೆತು ಸಾಧಕರಾದರು. ಅವರ ಬಿಡುಗಡೆಗಾಗಿ ನ್ಯಾಯಾಲಯದಲ್ಲಿ ವಾದಮಾಡಿದವರು ಕಲ್ಕತ್ತೆಯ ಸುಪ್ರಸಿದ್ಧ ವಕೀಲರಾದ ಚಿತ್ತರಂಜನ ದಾಸರು. ಅವರು ನ್ಯಾಯಾಲಯದಲ್ಲಿ ಅರವಿಂದರ ಪರವಾಗಿ ವಾದಮಾಡಿ ಕಡೆಯಲ್ಲಿ ಈ ರೀತಿ ನುಡಿದರು:

"ಈ ನ್ಯಾಯಾಲಯದ ವಿವಾದ ಮುಗಿದ ಬಳಿಕ, ಈ ಸ್ವಾತಂತ್ರ್ಯ ಸಂಗ್ರಾಮ ನಿಂತ ಬಳಿಕ, ಅರವಿಂದರು ದೇಹ ತ್ಯಾಗ ಮಾಡಿದ ಬಳಿಕ, ಅವರನ್ನು ದೇಶಭಕ್ತ ಕವಿಯೆಂದೂ ರಾಷ್ಟ್ರೀಯತೆಯನ್ನು ಸಾರಿದ ಪ್ರವಾದಿಯೆಂದೂ ಮಾನವ ಕುಲದ ಪರಮಪ್ರೇಮಿಯೆಂದೂ ಲೋಕದ ಜನರು ಅರಿಯುತ್ತಾರೆ. . . .

ಅರವಿಂದರ ನುಡಿಗಳು ಭಾರತದಲ್ಲಿ ಮಾತ್ರವಲ್ಲದೆ ದೇಶವಿದೇಶಗಳಲ್ಲಿ ಪ್ರತಿಧ್ವನಿತವಾಗುತ್ತವೆ." ಚಿತ್ತರಂಜನ ದಾಸರ ಶಕ್ತಿಯುತವಾದ ವಿಚಾರ ಸರಣಿಯ ಫಲವಾಗಿ ೧೯೦೯ನೆ ಮೇ ೬ ರಂದು ಅರವಿಂದರು ಸೆರೆಮನೆಯಿಂದ ಬಿಡುಗಡೆಯಾದರು.

ಕಾರಾಗೃಹದಿಂದ ಹೊರಬಂದ ಅರವಿಂದರು ಇಂಗ್ಲಿಷಿನಲ್ಲಿ 'ಕರ್ಮಯೋಗಿ', ಬಂಗಾಳಿಯಲ್ಲಿ 'ಧರ್ಮ' ಎಂಬ ಸಾಪ್ತಾಹಿಕಗಳನ್ನು ಆರಂಭಿಸಿದರು. ಕಷ್ಟಗಳಿಗೆ ಹೆದರದೆ ಸಾಹಸೋನ್ಮುಖರಾಗಲು ಅನೇಕ ಲೇಖನಗಳನ್ನು ಈ ಪತ್ರಿಕೆಗಳಲ್ಲಿ ಅವರು ಪ್ರಕಟಿಸಿದರು. ಈ ಸಂದರ್ಭದಲ್ಲಿ ಬಂಗಾಳಿ ತರುಣನೊಬ್ಬನು ಕಲ್ಕತ್ತೆಯ ಹೈಕೋರ್ಟಿನ ಆವರಣದಲ್ಲಿ ಪೋಲಿಸ್ ಅಧಿಕಾರಿಯೊಬ್ಬನನ್ನು ಗುಂಡಿಟ್ಟು ಕೊಂದನು. ಈ ಘಟನೆಯನ್ನು ಅರವಿಂದರು ತಮ್ಮ ಪತ್ರಿಕೆಯಲ್ಲಿ ಟೀಕಿಸಿದರೂ ಬ್ರಿಟಿಷ್ ಸರ್ಕಾರವೇ ಈ ಕೃತ್ಯಗಳಿಗೆ ಕಾರಣವೆಂದು ಸಮರ್ಥಿಸಿದರು. ಸರ್ಕಾರ, ಅರವಿಂದರನ್ನು ಪುನಃ ಸೆರೆಮನೆಗೆ ಕಳುಹಿಸಲು ಕಾರಣ ಹುಡುಕುತ್ತಿತ್ತು. ಅರವಿಂದರು ತಮ್ಮ ಜೀವನವನ್ನು ಸಂಪೂರ್ಣವಾಗಿ ಯೋಗಸಾಧನೆಗೆ ಅರ್ಪಿಸಿ, ರಾಷ್ಟ್ರದ ಹಾಗೂ ಪ್ರಪಂಚದ ಹಿತವನ್ನು ಸಾಧಿಸಲು ಸಂಕಲ್ಪಮಾಡಿದರು.

ಪಾಂಡಿಚೆರಿ

೧೯೧೦ನೆ ಫೆಬ್ರುವರಿ ತಿಂಗಳಲ್ಲಿ ಅರವಿಂದರು ಕಲ್ಕತ್ತೆಯನ್ನು ಬಿಟ್ಟು ಕೆಲವು ತಿಂಗಳು ಚಂದ್ರನಗರದಲ್ಲಿದ್ದು ಅಲ್ಲಿಂದ ೧೯೧೦ನೆ ಏಪ್ರಿಲ್ ತಿಂಗಳ ೪ನೆ ದಿನ ಪಾಂಡಿಚೆರಿಯನ್ನು ಸೇರಿದರು. ಅಂದಿನಿಂದ ತಮ್ಮ ಭೌತಿಕ ಶರೀರವನ್ನು ತ್ಯಜಿಸುವವರೆಗೆ ಅವರು ಪಾಂಡಿಚೆರಿಯಿಂದ ಕದಲಲಿಲ್ಲ. ಪಾಂಡಿಚೆರಿ

ಅವರ ತಪೋಭೂಮಿಯಾಯಿತು. ಕರ್ಮಕ್ಷೇತ್ರದ ಕೋಲಾಹಲದಿಂದ ವಿಮುಖರಾಗಿ ಅವರು ತಪೋನಿಷ್ಠರಾದರು. ಅಲ್ಲೋಲ ಕಲ್ಲೋಲಮಯವಾದ ಪಾಂಡಿಚೆರಿಯ ಸಮುದ್ರತೀರದಲ್ಲಿ ಅರವಿಂದರ ನೀರವ ಪ್ರಶಾಂತ ಆಶ್ರಮ ಬೆಳೆಯಿತು. ಭೌತಿಕವಾದ ಸುಖಜೀವನ ಲಭಿಸದಿದ್ದರೂ ಆರ್ಥಿಕ ಮುಗ್ಗಟ್ಟಿದ್ದರೂ ಅರವಿಂದರ ಅವಿಚಲ ಸಾಧನೆ ಮುಂದುವರೆಯಿತು. ಪುನಃ ರಾಜಕೀಯ ಸಂಗ್ರಾಮದಲ್ಲಿ ಪ್ರಮುಖಪಾತ್ರ ವಹಿಸಬೇಕೆಂದು ಅವರ ಮಿತ್ರರಿಂದ ಕರೆಬಂದರೂ ಅರವಿಂದರು ತಮ್ಮ ಆತ್ಮದ ಕರೆಯನ್ನು ಮಾತ್ರ ಮಾನ್ಯಮಾಡಿದರು. ತಮಗೆ ದೊರಕಬಹುದಾದ ನಾಯಕತ್ವದ ಆಕರ್ಷಣೆ ಅವರನ್ನು ವಿಚಲಿತಗೊಳಿಸಲಿಲ್ಲ. ತಮ್ಮ ಸಾಧನೆಗಳಿಂದ ಗಳಿಸಿದ ಅನುಭವಗಳನ್ನು 'ಆರ್ಯ' ಎಂಬ ಪತ್ರಿಕೆಯ ಮೂಲಕ ಪ್ರಕಾಶ ಪಡಿಸಿದರು. ಈ ಪತ್ರಿಕೆಯ ಮೊದಲ ಸಂಚಿಕೆ ಆರಂಭವಾದುದು ೧೯೧೪ನೆ ಆಗಸ್ಟ್ ೧೫ರಂದು. ಆಗತಾನೆ ಯೂರೋಪಿನಲ್ಲಿ ಮಹಾಸಂಗ್ರಾಮ ಆರಂಭವಾಗಿತ್ತು. ಅರವಿಂದರು ಮಾನವರು ಪಾಶವೀಕತೆಯಿಂದ ಅಂಧರಾಗದೆ, ದಿವ್ಯ ಜೀವನದಲ್ಲಿ ಪ್ರತಿಷ್ಠಿತರಾಗಬೇಕೆಂದು ಕರೆಯಿತ್ತರು. 'ಆರ್ಯ' ಪತ್ರಿಕೆ ಏಳುವರ್ಷಗಳ ಕಾಲ ಪ್ರಸಾರವಾಯಿತು. ಈ ಪತ್ರಿಕೆಯಲ್ಲಿ ವೇದರಹಸ್ಯ, ಉಪನಿಷತ್ತುಗಳ ವ್ಯಾಖ್ಯಾನ, ದಿವ್ಯ ಜೀವನದ ಆದರ್ಶ, ಯೋಗಮಾರ್ಗದ ಪ್ರಣಾಳಿಕೆ, ಭಾರತೀಯ ಸಂಸ್ಕೃತಿಯ ಹಿರಿಮೆ, ಮಾನವಕುಲದ ಅಭ್ಯುದಯ, ಸಾಹಿತ್ಯ, ದರ್ಶನ–ಇತ್ಯಾದಿ ಹಲವು ವಿಷಯಗಳನ್ನು ಕುರಿತು ಅರವಿಂದರು ಪ್ರಬುದ್ಧ ಲೇಖನಗಳನ್ನು ಪ್ರಕಟಿಸಿದರು.

ಅರವಿಂದರನ್ನು ೧೯೧೪ನೆ ಮಾರ್ಚಿ ೨೯ರಂದು ಶ್ರೀಮತಿ ಮಿರಾರಾ ರಿಚರ್ಡ್ಸ್ ಎಂಬ ಫ್ರಾನ್ಸ್ ದೇಶದ ಮಹಿಳೆ ಸಂದರ್ಶಿ

ಸಿದರು. ಅರವಿಂದರ ದಿವ್ಯಜೀವನದ ಕಲ್ಪನೆಯಿಂದ ಆಕರ್ಷಿತರಾದ ಅವರು ಕಡೆಗೆ ೧೯೨೦ನೆ ಏಪ್ರಿಲ್ ೨೪ರಂದು ಪಾಂಡಿಚೆರಿಗೆ ಬಂದು ಅವರ ಶಿಷ್ಯರಾಗಿ ಆಶ್ರಮದಲ್ಲಿ ನೆಲಸಿದರು. ಕ್ರಮೇಣ ದೇಶ ವಿದೇಶಗಳಿಂದ ಅನೇಕರು ಅರವಿಂದರ ದರ್ಶನದಿಂದ ಆಕರ್ಷಿತರಾಗಿ ಪಾಂಡಿಚೆರಿಗೆ ಬಂದರು. ಆ ಸಾಧಕರೆಲ್ಲರಿಗೂ ಸಾಧನೆಯಲ್ಲಿ ಮಾರ್ಗದರ್ಶನ ಮಾಡುವ ಹಾಗೂ ಭೋಜನ ಇತ್ಯಾದಿ ವ್ಯವಸ್ಥೆ ಮಾಡುವ ಕೆಲಸ ಮೀರಾ ರಿಚರ್ಡ್ಸ್ ಅವರ ಮೇಲೆ ಬಿತ್ತು. ಅವರು ಅರವಿಂದಾಶ್ರಮದ ಶ್ರೀಮಾತೆಯಾದರು. ಅರವಿಂದರು ಗಭೀರತರ ಸಾಧನೆಯಲ್ಲಿ ಮಗ್ನರಾದಂತೆ ಶ್ರೀಮಾತೆ ಆಶ್ರಮದ ಸಕಲ ಕಾರ್ಯಗಳ ವ್ಯವಸ್ಥೆಯನ್ನು ತಾವೇ ನೋಡಿಕೊಂಡರು. ಆಶ್ರಮವನ್ನು ರೂಪಿಸಲು ಅರವಿಂದರ ಬಳಿಯಾಗಲಿ ಶ್ರೀಮಾತೆಯವರ ಬಳಿಯಾಗಲಿ ಧನವಿರಲಿಲ್ಲ. ಶ್ರೀಮಾತೆಯ ಧೈರ್ಯ, ಗುರುವಿನಲ್ಲಿದ್ದ ಭಕ್ತಿ, ಆದರ್ಶದಲ್ಲಿ ದೃಢಪ್ರತಿಷ್ಠಿತ ಶ್ರದ್ಧೆ-ಇವೇ ಅವರನ್ನು ಮಹತ್ಕಾರ್ಯಕ್ಕೆ ಪ್ರೇರಿಸಿದುವು. ದಾರುಣ ಆರ್ಥಿಕ ಮುಗ್ಗಟ್ಟನೆದುರು ಕುಗ್ಗದೆ, ಶ್ರೀಮಾತೆ ಆಶ್ರಮವನ್ನು ರೂಪಿಸಿ, ಸಾಧಕರ ಬಾಹ್ಯಜೀವನ ಹಾಗೂ ಆಂತರಿಕ ಸಾಧನೆಗಳಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಲು ಎಲ್ಲ ಶಕ್ತಿಯನ್ನೂ ವಿನಿಯೋಗಿಸಿದರು. ಕ್ರಮೇಣ ಭಾಗವತ ಶಕ್ತಿಯ ಐಶ್ವರ್ಯ ಆಶ್ರಮದಲ್ಲಿ ವಿಕಸಿತವಾಯಿತು. ಅದನ್ನು ಕಂಡು ಲೌಕಿಕರು ವಿಸ್ಮಯಗೊಂಡರು.

೧೯೨೬ನೆ ನವೆಂಬರ್ ೨೪ನೇ ದಿನ ಮಹತ್ವಪೂರ್ಣ ದಿನ; ಕೇವಲ ಅರವಿಂದರ ದೃಷ್ಟಿಯಿಂದಲ್ಲ, ಪ್ರಪಂಚದ ದೃಷ್ಟಿಯಿಂದ. ಅಂದು ಎಂದಿನಂತೆ ಸಾಧಕರು ಸಂಜೆಯ ಸಮಯದಲ್ಲಿ ಧ್ಯಾನಕ್ಕೆ ಕುಳಿತಿದ್ದರು. ಶಾಂತ ವಾತಾವರಣ, ಮೌನ. ಶ್ರೀ ಅರವಿಂದರೂ

ಶ್ರೀ ಮಾತೆಯವರೂ ಆ ಸಭೆಯಲ್ಲಿ ಭಾಗವಹಿಸಿ ಧ್ಯಾನಮಗ್ನರಾದರು. ಶ್ರೀ ಅರವಿಂದರಿಂದ ವಿದ್ಯುತ್ ತರಂಗಗಳು ಅಲೆಅಲೆಯಾಗಿ ಅಲೌಕಿಕ ಬೆಳಗಿನೊಂದಿಗೆ ಹೊರಹೊಮ್ಮುತ್ತಿರುವುದು ಎಲ್ಲ ಸಾಧಕರಿಗೂ ಅನುಭವವಾಯಿತು. ಅಂದೇ ಅತಿಮಾನಸದ ಅವತರಣ ಶ್ರೀ ಅರವಿಂದರಲ್ಲಿ ಆದುದು! ಬಳಿಕ ಶ್ರೀ ಅರವಿಂದರು ಇನ್ನೂ ಮಹತ್ತರವಾದ ಸಾಧನೆಯಲ್ಲಿ ತೊಡಗಿದರು. ಆ ಸಾಧನೆಯ ಉದ್ದೇಶ, ಅತಿಮಾನಸವನ್ನು ಪ್ರಪಂಚದಲ್ಲಿ ಅವತರಿಸುವಂತೆ ಮಾಡುವುದೇ ಆಗಿತ್ತು. ಅವರಿಗೆ ತಮ್ಮ ಮುಕ್ತಿಯೊಂದರಲ್ಲಿಯೇ ತೃಪ್ತಿಯಿರಲಿಲ್ಲ. ಅತಿಮಾನಸ ಶಕ್ತಿ ವಿಶ್ವವ್ಯಾಪಕವಾಗಿ ಆವರಿಸಲೆಂಬುದೇ ಅವರ ಆಶಯವಾಗಿತ್ತು. ಅದಕ್ಕಾಗಿ ಮಹತ್ತರ ತಪಸ್ಯೆ ಅವರಿಗೆ ಆವಶ್ಯಕವಾಗಿತ್ತು. ಈ ಸಾಧನೆಯ ಮಧ್ಯೆ ಪ್ರತಿವರ್ಷವೂ ಫೆಬ್ರುವರಿ ೨೧, ಏಪ್ರಿಲ್ ೨೪, ಆಗಸ್ಟ್ ೧೫, ನವೆಂಬರ್ ೨೪ ಈ ನಾಲ್ಕು ದಿನಗಳಲ್ಲಿ ಸಾಧಕರು ಅವರನ್ನು ಸಂದರ್ಶಿಸಲು ಅವಕಾಶವಿತ್ತು. ಶ್ರೀಮಾತೆಯ ಹುಟ್ಟಿದ ದಿನ ಫೆಬ್ರುವರಿ ೨೧, ಶ್ರೀಮಾತೆ ಪಾಂಡಿಚೆರಿಗೆ ಬಂದು ನೆಲಸಿದ ದಿನ ಏಪ್ರಿಲ್ ೨೪, ಶ್ರೀ ಅರವಿಂದರ ಜನ್ಮದಿನ ಆಗಸ್ಟ್ ೧೫, ಶ್ರೀ ಅರವಿಂದರು ಅತಿಮಾನಸದ ಸಾಕ್ಷಾತ್ಕಾರ ಮಾಡಿಕೊಂಡ ದಿನ ನವೆಂಬರ್ ೨೪–ಈ ದಿನಗಳಲ್ಲಿ ಶ್ರೀ ಅರವಿಂದರು ಸಾಧಕರ ಸಂದರ್ಶನಕ್ಕೆ ಅವಕಾಶವಿತ್ತಿದರಲ್ಲಿ ಅರ್ಥವಿತ್ತು. ದೇಶ ವಿದೇಶಗಳಿಂದ ಸಾಧಕರು ಶ್ರೀ ಅರವಿಂದರ ದರ್ಶನಾರ್ಥಿಗಳಾಗಿ ಬರುತ್ತಿದ್ದರು. ಶ್ರೀ ಅರವಿಂದರು ವರ್ಷಕ್ಕೆ ನಾಲ್ಕು ಬಾರಿ ಸಂದರ್ಶನಕ್ಕೆ ಅವಕಾಶವಿತ್ತರೂ ಸಾಧಕರು ತಮ್ಮ ಸಮಸ್ಯೆಗಳಿಗೆ ಮಾರ್ಗದರ್ಶನ ಮಾಡಲು ಬರೆದ ಪತ್ರಗಳಿಗೆ ಅವರು ಉತ್ತರ ಬರೆಯುತ್ತಿದ್ದರು. ಹೀಗೆ ಉತ್ತರ ಬರೆಯಲು ಅವರಿಗೆ ದಿನಕ್ಕೆ ೧೦–೧೨

ಘಂಟೆಗಳ ಕಾಲ ಬೇಕಾಗುತ್ತಿತ್ತು! ಆದರೆ ಅವರು ತಮ್ಮ ಕರ್ತವ್ಯವೆಂದು ಉತ್ತರ ಬರೆಯುತ್ತಿದ್ದರು. ಮಾನವ ಕುಲದ ಮೇಲಿದ್ದ ಅವರ ಅಪಾರ ಪ್ರೇಮಕ್ಕೆ ಇದೊಂದು ನಿದರ್ಶನ. ಗ್ರಂಥರಚನೆ, ಸಾಧಕರ ಪತ್ರಗಳಿಗೆ ಉತ್ತರ, ವೈಯಕ್ತಿಕ ಸಾಧನೆ, ಸಮಷ್ಟಿಯ ಉದ್ಧಾರಕ್ಕಾಗಿ ತಪಸ್ಯೆ–ಇವೇ ಅವರ ಜೀವನದ ಕಾರ್ಯಕ್ಷೇತ್ರ. ೧೯೪೮ರಲ್ಲಿ ಆಂಧ್ರ ವಿಶ್ವವಿದ್ಯಾನಿಲಯ ಶ್ರೀ ಅರವಿಂದರಿಗೆ ರಾಷ್ಟ್ರೀಯ ಗೌರವವನ್ನು ಅರ್ಪಿಸಿತು. ವಿಶ್ವ ವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಶ್ರೀಮಾನ್ ಸಿ. ಆರ್. ರೆಡ್ಡಿಯವರು ಆ ಸಮಯದಲ್ಲಿ "ಶ್ರೀ ಅರವಿಂದರು ಈ ಯುಗದ ಮಹರ್ಷಿಗಳು. ಅವರು ಎಲ್ಲ ರಾಷ್ಟ್ರಗಳಿಗೂ ಎಲ್ಲ ಕಾಲಕ್ಕೂ ಮಾರ್ಗದರ್ಶಕರು, ಮಾನವ ಕುಲದ ಉದ್ಧಾರಕರು....ಅವರ ಆತ್ಮ ನಕ್ಷತ್ರದಂತೆ ಬೆಳಗುತ್ತಿದೆ." ಎಂದು ಘೋಷಿಸಿ, ಬಹು ಭಕ್ತಿಯಿಂದ ರಾಷ್ಟ್ರೀಯ ಗೌರವವನ್ನು ತಾವೇ ಸ್ವಹಸ್ತದಿಂದ ಪಾಂಡಿಚೆರಿಯಲ್ಲಿದ್ದ ಶ್ರೀ ಅರವಿಂದರಿಗೆ ಅರ್ಪಿಸಿದರು.

ಪ್ರಪಂಚದಲ್ಲಿ ಅತಿಮಾನಸದ ಅವತರಣ ಸಂಪೂರ್ಣವಾಗಿ ಆಗಲೆಂಬ ಧ್ಯೇಯದಿಂದ ತಪಸ್ಯೆಯಲ್ಲಿ ತೊಡಗಿದರು ಮಹಾ ಯೋಗಿ ಶ್ರೀ ಅರವಿಂದರು. ೧೯೫೦ ನೆ ಡಿಸೆಂಬರ್ ೪ ನೆ ದಿನ! ಮಧ್ಯರಾತ್ರಿ ೧೨ ಘಂಟೆ ಕಳೆದು ಡಿಸೆಂಬರ್ ೫ನೆ ದಿನದ ಆರಂಭ. ರಾತ್ರಿ ೧ ಘಂಟೆ ಕಳೆಯಿತು. ನಿಮಿಷ ನಿಮಿಷವೂ ಯೋಗಿ ವರ್ಯನನ್ನು ನೋಡುತ್ತಿತ್ತು, ೧ ಗಂಟೆಯಾಗಿ ೨೬ನೆ ನಿಮಿಷ ಬಂದಿತು! ಆ ಸಮಯಕ್ಕೆ ಶ್ರೀ ಅರವಿಂದರು ತಮ್ಮ ಪಾರ್ಥಿವ ಶರೀರವನ್ನು ಬಿಟ್ಟು ಮಹಾಸಮಾಧಿಯಲ್ಲಿ ಲೀನವಾದರು. ಆದರೆ ಮಹಾಯೋಗಿಯ ಶರೀರದಲ್ಲಿ ಬೆಳಗುತ್ತಿದ್ದ ತೇಜಸ್ಸು ತಿರೋಹಿತ ವಾಗಲಿಲ್ಲ. ಆ ಅಲೌಕಿಕ ತೇಜಸ್ಸು ಮಾಯವಾಗಲು ನಾಲ್ಕು

ದಿನಗಳು ಬೇಕಾದುವು. ಡಿಸೆಂಬರ್ ೫ರಿಂದ ೯ರ ವರೆಗೆ ಅಸಂಖ್ಯಾತ ಜನರು ಶ್ರೀ ಅರವಿಂದಾಶ್ರಮಕ್ಕೆ ಹೋಗಿ ಪುಷ್ಪಗಳನ್ನು ಅರ್ಪಿಸುವುದರ ಮೂಲಕ ತಮ್ಮ ಶ್ರದ್ಧಾಂಜಲಿಗಳನ್ನು ಸಮರ್ಪಿಸಿದರು. ೯ನೆ ಡಿಸೆಂಬರ್ ಪ್ರಾತಃಕಾಲ ೫ ಗಂಟೆಗೆ, ಆಶ್ರಮದ ಆವರಣದಲ್ಲಿ ವೃಕ್ಷರಾಜಿಗಳ ನಡುವೆ ಶ್ರೀ ಅರವಿಂದರ ಸಮಾಧಿ ನಿರ್ಮಿತವಾಯಿತು. ಮಹಾಯೋಗಿಯ ಸರಳಜೀವನದ ಸರಳಪ್ರತೀಕವಾಗಿದೆ ಅವರ ಸಮಾಧಿ. ಆ ಸಮಯದಲ್ಲಿ ಶ್ರೀಮಾತೆ, "ನಮಗಾಗಿ ದುಡಿದು, ಹೋರಾಡಿ, ಯಾತನೆಗಳನ್ನು ಅನುಭವಿಸಿ, ಪ್ರಪಂಚದ ಉಜ್ಜ್ವಲ ಭವಿಷ್ಯವನ್ನು ಹಾರೈಸಿದ ನಿಮಗೆ,.... ಭಕ್ತಿಯ ಪ್ರಣಾಮಗಳು. ನೀವು ತೋರಿದ ಜ್ಯೋತಿ-ಪಥದಿಂದ ಒಂದು ಕ್ಷಣವೂ ನಾವು ವಿಮುಖರಾಗದಂತೆ ನಮ್ಮನ್ನು ಆಶೀರ್ವದಿಸಿ. ಪ್ರಣಾಮಗಳು, ಪ್ರಣಾಮಗಳು."ಎಂದು ಭಕ್ತಿಯ ಪ್ರಣಾಮಗಳನ್ನು ಅರ್ಪಿಸಿದರು.

ದೇಶವಿದೇಶಗಳಿಂದ ಶ್ರೀ ಅರವಿಂದರಿಗೆ ಶ್ರದ್ಧಾಂಜಲಿಗಳನ್ನು ಸಲ್ಲಿಸುವ ಅಸಂಖ್ಯಾತ ಪತ್ರಗಳು ಬಂದುವು. ಯೋಗಿವರ್ಯನ ಕೃತಿಗಳು ಲೋಕವ್ಯಾಪಕವಾದುದರ ಸಂಕೇತವಾಗಿತ್ತು ಆ ಪತ್ರಗಳು! ಪಾಂಡಿಚೆರಿಯಲ್ಲಿ ನಲವತ್ತು ವರ್ಷಗಳ ಕಾಲ ನೆಲಸಿ, ತಮ್ಮ ನಿರಂತರ ಸಾಧನೆಯಿಂದ ಸಿದ್ಧಿಪಡೆದು ಜಗತ್ತಿನ ಸಿದ್ಧಿಗಾಗಿ ಮಹಾಯೋಗದಲ್ಲಿ ಲೀನರಾದ ಶ್ರೀ ಅರವಿಂದರ ಕೃತಿಗಳು ಇಂದಿಗೂ ಜೀವಂತವಾಗಿವೆ, ಸಾಧಕರಿಗೆ ಜ್ಯೋತಿ-ಪಥವನ್ನು ತೋರಲು ಶಕ್ತವಾಗಿವೆ. ಅವರ ಜೀವನದ ಎಲ್ಲ ವಿವರಗಳನ್ನು ತಿಳಿಯಲು ಯಾರಿಗೂ ಸಾಧ್ಯವಿಲ್ಲ; ಏಕೆಂದರೆ ಅವರದು ಅಂತರ್ಮುಖ ವ್ಯೋಮಸಾಹಸ. ಅವರನ್ನು ಅರಿಯಲು ಮುಖ್ಯ ಸಾಧನಗಳೆಂದರೆ, ಅವರ ಕೃತಿಗಳು. ಅವರ ಯೋಗ

ಸಾಧನೆಯ ಪ್ರತೀಕವಾಗಿ ಇಂದಿಗೂ ಶ್ರೀ ಅರವಿಂದಾಶ್ರಮ ಶ್ರೀಮಾತೆಯ ನೇತೃತ್ವದಲ್ಲಿ ಮಹಾಕರ್ಮ ಕ್ಷೇತ್ರವಾಗಿದೆ. ಮಹಾಯೋಗಿಯ ಯೌಗಿಕಶಕ್ತಿ ಆಶ್ರಮದಲ್ಲಿ ಕ್ರಿಯಾಭಿಮುಖ ವಾಗಿದೆ, ಅತಿಮಾನಸದ ಅವತರಣಕ್ಕಾಗಿ ಚಿರತಪಸ್ಯೆಯಲ್ಲಿದೆ.

## ೩. ಕೃತಿಗಳು

ಶ್ರೀ ಅರವಿಂದರ ಕೃತಿಗಳು ಹಿಮಾಲಯ ಸದೃಶವಾಗಿವೆ. ಆ ಕೃತಿಗಳ ವ್ಯಾಪ್ತಿ ಮತ್ತು ಮಹತ್ವಗಳನ್ನು ಈ ಪುಟ್ಟ ಪುಸ್ತಕ ದಲ್ಲಿ ನಿರೂಪಿಸುವುದು ಸಾಧ್ಯವಿಲ್ಲ. ಅವರ ಕೃತಿಗಳ ಸಂಖ್ಯೆ ಬಹಳ ದೊಡ್ಡದು. ಅವರ ಮುಖ್ಯ ಕೃತಿಗಳ ಪಟ್ಟಿಯನ್ನು ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿದೆ. ಇಲ್ಲಿ ಗೀತಾ ಪ್ರಬಂಧಗಳು (Essays on the Gita), ಯೋಗಸಮನ್ವಯ, (Synthesis of Yoga), ದಿವ್ಯಜೀವನ, (Life Divine), ಸಾವಿತ್ರಿ–ಈ ಕೃತಿಗಳ ರೇಖಾಪರಿಚಯವನ್ನು ಮಾತ್ರ ಕಾಣಬಹುದು.

### ಗೀತಾ ಪ್ರಬಂಧಗಳು

ಜಗತ್ತಿನಲ್ಲಿ ಹಲವು ಧರ್ಮಗ್ರಂಥಗಳಿವೆ, ದಾರ್ಶನಿಕ ಮತ ಭೇದಗಳಿವೆ. ಆದರೆ ಸತ್ಯಮಾತ್ರ ಒಂದೇ. ಸನಾತನ ಹಿಂದೂ ಸತ್ಯ, ಇಸ್ಲಾಂ ಸತ್ಯ, ಕ್ರೈಸ್ತ ಸತ್ಯ–ಇವೆಲ್ಲ ಭಿನ್ನವಲ್ಲ. ಕಾಲ ಹಾಗೂ ಪಾತ್ರ ವಿಭೇದಗಳಿಂದ ಬೇರೆಬೇರೆ ರೂಪಗಳಲ್ಲಿ ಅಭಿವ್ಯಕ್ತ ವಾದ ಒಂದೇ ಸನಾತನ ಸತ್ಯದ ಬೇರೆ ಬೇರೆ ಮುಖಗಳು. ಗೀತೆ ಯಲ್ಲಿ ಲೋಕದ ಸಕಲ ಜ್ಞಾನವೂ ಅಡಗಿದೆ ಎಂದು ವಾದಿಸುವು ದಕ್ಕಿಂತ, ಗೀತೆ ಬೋಧಿಸುವ ವಿಚಾರಧಾರೆಯತ್ತ ದೃಷ್ಟಿಯಿಡು ವುದು ಉತ್ತಮ.

"ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ"
—ಗೀತೆ ೩. ೧೧.

"ಒಬ್ಬರನ್ನೊಬ್ಬರು ಗೌರವಿಸಿ ಪರಮಶ್ರೇಯಸ್ಸನ್ನು ಪಡೆಯಿರಿ"

ಗೀತೆಯ ಈ ನುಡಿ ತುಂಬ ವ್ಯಾಪಕವಾದುದು. ಸಮುದ್ರದಿಂದ ಮೇಘ, ಮೇಘದಿಂದ ಮಳೆ, ಮಳೆಯಿಂದ ಬೆಳೆ. ಬೆಳೆಯಿಂದ ಜೀವನ–ಹೀಗೆ ಲೋಕದಲ್ಲಿ ಪರಸ್ಪರ ಸಂಬಂಧವಿದೆ. ಪರಸ್ಪರ ನಿವೇದನವನ್ನು ಯಜ್ಞವೆಂದು ಕರೆದರು ಪ್ರಾಚೀನ ಋಷಿಗಳು. ಯಜ್ಞವೆಂದರೆ ಅರ್ಪಣೆ, ತ್ಯಾಗ. ಪ್ರತಿ ವ್ಯಕ್ತಿಯೂ ಸಮಾಜಕ್ಕೂ ದೇಶಕ್ಕೂ ಋಣಿಯಾಗಿದ್ದಾನೆ. ಆದಕ್ಕಾಗಿ ನಿವೇದನ ರೂಪದಲ್ಲಿ ಮಾಡುವ ಕರ್ಮವೇ ಯಜ್ಞ. ಕೇವಲ ಸ್ವಾರ್ಥಿಯ ಜೀವನ ವ್ಯರ್ಥ.

"ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ"
—ಗೀತೆ ೩. ೧೬.

"ಇಂದ್ರಿಯ ಸುಖಗಳಲ್ಲಿಯೇ ಮಗ್ನನಾದವನು ಪಾಪಾತ್ಮನು. ಅವನು ವ್ಯರ್ಥವಾಗಿ ಬದುಕುತ್ತಾನೆ. ಪಾರ್ಥ".

ನಿಸ್ವಾರ್ಥ ದೃಷ್ಟಿಯನ್ನು ಉಚ್ಚಕಂಠದಿಂದ ಘೋಷಿಸುತ್ತದೆ ಗೀತೆ. ಭಾರತೀಯ ಸಂಸ್ಕೃತಿಯ ಬುನಾದಿ ಈ ನಿಸ್ವಾರ್ಥ.

ಆಧ್ಯಾತ್ಮಿಕ ಸತ್ಯದ ಬಾಹ್ಯರೂಪದ ಸಂಕೇತವಾಗಿ ವರ್ಣ ವ್ಯವಸ್ಥೆ ಆರಂಭವಾಯಿತು. ಸತ್ವರಜಸ್ತಮೋಗುಣಗಳೇ ಮಾನವನ ಸ್ವಭಾವವನ್ನು ನಿರ್ಧರಿಸುವುವು. ಸ್ವಭಾವದಂತೆ ಮನುಷ್ಯನ ಕರ್ಮ. ಗುಣಕರ್ಮಗಳಂತೆ ವರ್ಣವಿಭಾಗ. ಗುಣ ಕರ್ಮಗಳಿಗನುಗುಣವಾಗಿ ಹೊಮ್ಮಿದ ವರ್ಣವ್ಯವಸ್ಥೆ, ಕ್ರಮೇಣ ಹುಟ್ಟಿನಿಂದ ಎಂಬ ಸಂಕುಚಿತ ದೃಷ್ಟಿಯಿಂದ ವಿಭಜನೆ ಆಯಿತು. ಈ ದೃಷ್ಟಿಯ ವರ್ಣವ್ಯವಸ್ಥೆ ಅರ್ಥಶೂನ್ಯ. ಪ್ರತಿಯೊಬ್ಬ

ವ್ಯಕ್ತಿಯೂ ತನ್ನ ಸ್ವಭಾವಕ್ಕೆ ಅನುಗುಣವಾದ ಕರ್ಮದಲ್ಲಿ ತೊಡಗುವುದೇ ಅತ್ಯಂತ ಸಹಜವಾದುದು. ಈ ವಿಚಾರವಾಗಿ ಗೀತೆಯ ದೃಷ್ಟಿ ಸ್ಪಷ್ಟವಾಗಿದೆ.

"ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ"

"ಗುಣಕರ್ಮಗಳಿಗನುಗುಣವಾಗಿ ನಾಲ್ಕು ವರ್ಣಗಳು ನನ್ನಿಂದಲೆ ಸೃಷ್ಟಿಸಲ್ಪಟ್ಟಿವೆ".

ಜಗತ್ತಿನ ಮಾನವಕೋಟಿಯನ್ನು ಅವರವರ ಗುಣಕರ್ಮಗಳಿಗನುಗುಣವಾಗಿ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಭಜಿಸಬಹುದು. ಇಲ್ಲಿ ಮೇಲು ಕೀಳಿನ ಪ್ರಶ್ನೆಯೇ ಇಲ್ಲ; ಕೇವಲ ಅವರವರ ಗುಣಕರ್ಮಗಳಿಗನುಸಾರವಾಗಿ ಮಾಡಿದ ವಿಭಾಗ.

ಗೀತೆಯ ಭಾಷೆ, ಚಿಂತನೆ, ಭಾವ, ವಿಚಾರ—ಇವೆಲ್ಲ ಯಾವ ಮತಪ್ರಸಾರಕ್ಕಾಗಿ ನಿಯೋಜಿತವಾಗಿಲ್ಲ. ಅನಾದಿ ಬ್ರಹ್ಮದಿಂದ ಈ ಜಗತ್ತಿನ ಸೃಷ್ಟಿಯಾಯಿತೆಂದು ಗೀತೆ ಪ್ರತಿಪಾದಿಸುವುದರಿಂದ ಅದು ಅದ್ವೈತ ತತ್ತ್ವವನ್ನು ನಿರೂಪಿಸುವ ಗ್ರಂಥವಲ್ಲ. ಮಾಯೆಯ ವಿಚಾರವನ್ನು ಹೇಳಿದರೂ ಮಾಯಾವಾದವನ್ನು ಪುಷ್ಟೀಕರಿಸುವುದಿಲ್ಲ ಗೀತೆ. ಸಾಂಖ್ಯತತ್ತ್ವವಿಚಾರವಿದ್ದರೂ ಗೀತೆ ಪ್ರತಿಪಾದಿಸುವುದು ಸಾಂಖ್ಯತತ್ತ್ವವನ್ನಲ್ಲ. ಶ್ರೀಕೃಷ್ಣನ ವಿಚಾರ ಬಂದರೂ ವೈಷ್ಣವತತ್ತ್ವವನ್ನಲ್ಲ ಗೀತೆ ನಿರೂಪಿಸುವುದು. ಸಕಲ ದೃಷ್ಟಿಗಳನ್ನು ಸಮನ್ವಯಗೊಳಿಸುವ ಅಪೂರ್ವ ಕೃತಿ ಗೀತೆ. ಋಷಿಗಳು ವೇದೋಪನಿಷತ್ತುಗಳಲ್ಲಿ ಉಸುರಿದ ಜ್ಞಾನ ಕರ್ಮ ಭಕ್ತಿಗಳನ್ನು ಗೀತೆ ಸಮನ್ವಯಗೊಳಿಸಿದೆ. ಗೀತೆ ಕೇವಲ ಭಾರತೀಯರನ್ನು ತನ್ನ ದೃಷ್ಟಿಯಲ್ಲಿಟ್ಟುಕೊಂಡಿಲ್ಲ. ಜಗತ್ತಿನ ಸಮಸ್ತ ಮಾನವರೆಲ್ಲರನ್ನೂ

ದೃಷ್ಟಿಯಲ್ಲಿಟ್ಟುಕೊಂಡು ವಿಶ್ವವ್ಯಾಪಕತತ್ತ್ವಗಳನ್ನು ರೂಪಿಸಿ, ಮಾನವತ್ವದಿಂದ ದೇವತ್ವಕ್ಕೇರುವ ಸತ್ಪಥವನ್ನು ತೋರುತ್ತದೆ ಈ ಸದ್ಗ್ರಂಥ.

ಗೀತೆಯು ಉದಯವಾದುದು ಮಹಾಭಾರತದ ರಣರಂಗದ ನಡುವೆ. ಈ ಕೃತಿ ಕೇವಲ ತತ್ತ್ವವನ್ನು ಬೋಧಿಸುವ ಗ್ರಂಥವಲ್ಲ. ಜೀವನದ ಜೀವಂತ ಸಮಸ್ಯೆಗಳಿಗೆ ಪರಿಹಾರ ಹೇಳುವ ಅತ್ಯಂತ ಪ್ರಯೋಜನಕಾರಿಯೂ ಜೀವನೋಪಯುಕ್ತವೂ ಆದ ಗ್ರಂಥವಿದು. ಶ್ರೀಕೃಷ್ಣನು ಭರತಖಂಡದ ಧಾರ್ಮಿಕ ಜೀವನದ ಮೇಲೆ ವಿಶೇಷ ಪ್ರಭಾವ ಬೀರಿದ ವ್ಯಕ್ತಿ. ಸಂಸಾರದ ವಿಷಮ ಸನ್ನಿವೇಶಗಳಲ್ಲಿ ಕಿಂಕರ್ತವ್ಯ ವಿಮೂಢರಾದ ಮಾನವಕುಲಕ್ಕೆ ಗುರು, ಸಖ ಹಾಗೂ ಮಾರ್ಗದರ್ಶಕನಾಗಿ ಮೈದೋರಿದ್ದಾನೆ ಗೀತೆಯ ಶ್ರೀಕೃಷ್ಣ. ಬಂಧುಗಳ ಹತ್ಯೆಯಂತಹ ಭಯಂಕರ ಕೊಲೆಗೆ ಅರ್ಜುನನ ಮನಸ್ಸು ಒಪ್ಪದಿದ್ದಾಗ, ಅವನಿಗೆ ಪರಮ ರಹಸ್ಯವನ್ನು ಬೋಧಿಸಿದನು ಶ್ರೀಕೃಷ್ಣ. ಅದರ ಪರಿಣಾಮವಾಗಿ ಅರ್ಜುನನು ಯೋಧನಾಗಿ, ಶ್ರೀಕೃಷ್ಣನು ಸಾರಥಿಯಾಗಿ ರಣಕ್ಷೇತ್ರದಲ್ಲಿ ಶಸ್ತ್ರಾಸ್ತ್ರಗಳ ಮಧ್ಯೆ ಜೀವಂತವಾಗಿ ಧೀರರಾಗಿ ಬದುಕಿದರು.

ಸರ್ವೇಶ್ವರನು ಸರ್ವಭೂತಗಳಲ್ಲಿ ಸ್ಥಿತನಾಗಿದ್ದಾನೆ. ಅವನೆ ಎಲ್ಲರನ್ನು ಎಲ್ಲ ಕರ್ಮಗಳ ನಡುವೆ ಮುನ್ನಡೆಸುವವನು. ಅವನೇ ಜೀವನದ ಅಧೀಶ್ವರ. ಆ ಅಧೀಶ್ವರನೇ ಜೀವನದ ಸಾರಥಿಯಾಗಬೇಕು. ಇಂದಿನ ವೈಜ್ಞಾನಿಕ ಹಾಗೂ ವ್ಯಾವಹಾರಿಕ ಮನಸ್ಸು, ಗೀತೆ ಕೇವಲ ಕರ್ಮಪಥವನ್ನು ತೋರುವ ಗ್ರಂಥವೆಂದು ಸಾರಬಹುದು. ಗೀತೆ ಕರ್ಮಕ್ಕೆ ಯುಕ್ತವಾದ ಸ್ಥಾನವನ್ನಿತ್ತಿರುವುದು ಸತ್ಯ; ಆದರೆ ಜ್ಞಾನ, ಭಕ್ತಿ ಆತ್ಮಸಮರ್ಪಣಗಳನ್ನೂ ಬೋಧಿಸು

ತ್ತದೆ. ಮಾನವ ಕುಲದ ಏಳಿಗೆಗಾಗಿ ಮಾಡುವ ಕರ್ಮವೇ ಸರ್ವ ಶ್ರೇಷ್ಠವೆಂಬುದು ಆಧುನಿಕರ ಆದರ್ಶ. ಗೀತೆಯ ಕರ್ಮಯೋಗದ ಆದರ್ಶ ಅಷ್ಟರಲ್ಲಿಯೆ ಮುಕ್ತಾಯವಾಗುವುದಿಲ್ಲ. ಕರ್ಮ, ಜ್ಞಾನ, ಭಕ್ತಿಗಳನ್ನು ಪಡೆವ ಸಾಧನೆಗೆ ಪ್ರೇರಕ ಗೀತೆ. ಈಶ್ವರ ಪ್ರೀತಿಗಾಗಿ, ಜಗತ್ತಿನ ಹಿತಕ್ಕಾಗಿ ಮಾಡುವ ಕರ್ಮದಿಂದ ಜ್ಞಾನಭಕ್ತಿಗಳನ್ನು ಪಡೆವ ಮಹಾಮಾರ್ಗದರ್ಶನ ಮಾಡುತ್ತದೆ ಗೀತೆ.

ಒಟ್ಟಿನಲ್ಲಿ ಗೀತೆ, ಆಧ್ಯಾತ್ಮಿಕ ಜೀವನಕ್ಕೆ ಮಾರ್ಗದರ್ಶನ ಮಾಡುವ ಮಹಾಕೃತಿ. ಕರ್ಮದಲ್ಲಿ ನಿಷ್ಠೆಯನ್ನು ಬೆಳಸಿ, ಕರ್ಮ ನಿಷ್ಠೆಯಿಂದ ಜ್ಞಾನವನ್ನೂ ಜ್ಞಾನದಿಂದ ಭಕ್ತಿಯನ್ನೂ ಬೆಳಸು ತ್ತದೆ ಗೀತೆ. ಆಧುನಿಕ ನಾಗರಿಕ ಜೀವನ, ಪ್ರಾಣ, ಮನಸ್ಸು, ಬುದ್ಧಿ–ಇಷ್ಟರಲ್ಲಿಯೇ ವ್ಯವಹರಿಸುತ್ತದೆ. ಆಧ್ಯಾತ್ಮಿಕ ಜೀವನ ದೆತ್ತರಕ್ಕೆ ಏರಿಲ್ಲ. ಭಗವಂತನಲ್ಲಿ ವಾಸಿಸುತ್ತ ಜಗತ್ತಿನ ಕಲ್ಯಾಣ ಕ್ಕಾಗಿ ಕರ್ಮತತ್ಪರರಾಗಬೇಕೆಂಬುದೇ ಗೀತೆಯ ಬೋಧನೆಯ ಸಾರ.

## ಯೋಗ ಸಮನ್ವಯ (Synthesis of Yoga)

ಜೀವನವೆಲ್ಲ ಒಂದು ರೀತಿಯ ಯೋಗ. ವಿಶ್ವಪ್ರಕೃತಿ ಮಹಾ ಯೋಗದಲ್ಲಿ ತನ್ಮಯವಾಗಿದ್ದಾಳೆ. ಕೇವಲ ಪ್ರಕೃತಿಗೆ ಬಿಟ್ಟರೆ ಸಹಸ್ರಾರು ವರ್ಷಗಳಾಗುವ ಕೆಲಸವನ್ನು ಒಂದೇ ಜೀವನದಲ್ಲಿ ಸಾಧಿಸುವ ಯತ್ನ ಯೋಗ. ಪ್ರಾಚೀನರ ದೃಷ್ಟಿಯಲ್ಲಿ ಆತ್ಮ ಸಾಕ್ಷಾತ್ಕಾರವೆ ಮಾನವನ ಆದರ್ಶ. ಶ್ರೀ ಅರವಿಂದರು ಆತ್ಮ ಸಾಕ್ಷಾತ್ಕಾರದ ಬೆಳಕಿನಿಂದ ಜಗತ್ತನ್ನು ಪರಿವರ್ತಿಸಿ ದಿವ್ಯಜೀವನ ವನ್ನು ಪ್ರತಿಷ್ಠಾಪಿಸಬೇಕೆಂದು ಸಾರಿದರು.

ಜಗತ್ತಿನ ಮಹಾಪುರುಷರೆಲ್ಲರೂ ಭಗವಂತನ ಶಕ್ತಿಯ ಅವತರಣ ಹಾಗೂ ವಿಕಾಸಕ್ಕಾಗಿ, ನೇರವಾಗಿ ಪ್ರಕೃತಿಯು ಯೋಗ ವೇಗಗಾಮಿಯಾಗುವಂತೆ ಮಾಡಿದ್ದಾರೆ. ಮುಕ್ತಿಯೇ ಜೀವನದ ಆದರ್ಶವಾದರೂ ಆ ಮುಕ್ತಿ ಸಾಧಾರಣೀಕರಣವಾಗಬೇಕೆಂದರು ಶ್ರೀ ಅರವಿಂದರು. ಯೋಗದಲ್ಲಿ ಪ್ರಕೃತಿ, ಮಾನವ ಆತ್ಮ, ಭಗವಂತ—ಈ ಮೂರು ಶಕ್ತಿಗಳ ಮಿಳನವಾಗುತ್ತದೆ. ದೇಹದ ಬೆಳವಣಿಗೆಯತ್ತ ದೃಷ್ಟಿ ಕೇಂದ್ರೀಕೃತವಾಗುತ್ತದೆ ಹಠಯೋಗ ದಲ್ಲಿ. ರಾಜಯೋಗದಲ್ಲಿ ದೇಹ ಮನಸ್ಸುಗಳ ನೈರ್ಮಲ್ಯದ ಕಡೆಗೇ ದೃಷ್ಟಿ ಹೆಚ್ಚು; ಬುದ್ಧಿ. ಹೃದಯ, ಕರ್ಮ—ಇವುಗಳ ಸಮನ್ವಯದತ್ತ ಲಕ್ಷ್ಯವಿಲ್ಲ. ವಿಚಾರ ವಿವೇಕಗಳ ಮೂಲಕ ಜ್ಞಾನವನ್ನು ಪಡೆಯಲು ಮಾರ್ಗ ತೋರುತ್ತದೆ ಜ್ಞಾನಯೋಗ; ಕರ್ಮಭಕ್ತಿಗಳನ್ನು ಅದು ವಿವೇಚಿಸುವುದಿಲ್ಲ. ಈ ಯೋಗಮಾರ್ಗ ಗಳಲ್ಲಿರುವ ಅರಕೆಯನ್ನು ಕಂಡ ಶ್ರೀ ಅರವಿಂದರು ಸಮನ್ವಯ ಯೋಗಸಿದ್ಧಾಂತವನ್ನು ರೂಪಿಸಿದರು.

ಈ ಸಮನ್ವಯ ಯೋಗಮಾರ್ಗದಲ್ಲಿ ಶ್ರೀ ಅರವಿಂದರು ನಿಯತವಾದ ಸಾಧನಾಮಾರ್ಗವನ್ನು ಹೇಳುವುದಿಲ್ಲ. ಆದರೆ ಸಾಧಕನು ಏರಬೇಕಾದ ಎತ್ತರ, ಮಾರ್ಗದ ಕಷ್ಟಗಳು ಮೊದ ಲಾದವುಗಳ ಮೇಲೆ ಬೆಳಕು ಬೀರುತ್ತಾರೆ. ಈ ಯೋಗದಲ್ಲಿ ಸಾಧಕನೇ ತನ್ನ ಮಾರ್ಗವನ್ನು ರೂಪಿಸಬೇಕು. ಪ್ರತಿಯೊಬ್ಬನೂ ತನ್ನ ವೈಯಕ್ತಿಕ ಮಾರ್ಗವನ್ನು ಯೋಜಿಸುವ ಸ್ವಾತಂತ್ರ್ಯ ಪಡೆಯುತ್ತಾನೆ. ಈ ಯೋಗದಲ್ಲಿ ವಿಭೂತಿಯನ್ನು ಧರಿಸಬೇಕೆ? ನಾಮಧಾರಣೆ ಮಾಡಿಕೊಳ್ಳಬೇಕೆ? ಮುದ್ರಾಧಾರಣೆ ಮಾಡಿ ಕೊಳ್ಳಬೇಕೆ? ಎಂಬ ನಿಯಮಗಳಿಲ್ಲ. ಶಿವ, ವಿಷ್ಣು, ದುರ್ಗಾ ಯಾರನ್ನು ಆರಾಧಿಸಲಿ? ಎಂದು ಚಿಂತಿಸಬೇಕಾಗಿಲ್ಲ. ಈ ಯೋಗ

ದಲ್ಲಿ ಭಗವಂತನಲ್ಲಿ ಪೂರ್ಣಸಮರ್ಪಣವೇ ಮುಖ್ಯ ಸಾಧನ. ಅನಂತಜ್ಞಾನ ವ್ಯಕ್ತಿಯ ಹೃತ್ಕಮಲದಲ್ಲಿ ಅವ್ಯಕ್ತವಾಗಿದೆ. ಅದರ ದಳಗಳೆಲ್ಲ ಒಮ್ಮೆಯೇ ಅರಳಬಹುದು, ಅಥವಾ ಒಂದಾದ ಬಳಿಕ ಮತ್ತೊಂದು ದಳ ಅರಳಬಹುದು. ಒಮ್ಮೆ ಹೃದಯ ಭಗವನ್ಮುಖವಾದರೆ, ವ್ಯಕ್ತಿಯ ಉದ್ಧಾರ ಖಚಿತ. ಯೋಗ ಸಾಧನೆಗೆ ಖಚಿತವಾದ ಮಾರ್ಗಗಳನ್ನು ಶ್ರೀ ಅರವಿಂದರು ಸೂಚಿಸದಿದ್ದರೂ ಉತ್ಸಾಹ, ಶಾಸ್ತ್ರ, ಗುರು, ಕಾಲ ಎಂಬ ನಾಲ್ಕು ಸಾಧನ ಚತುಷ್ಟಯಗಳನ್ನು ಹೇಳಿದ್ದಾರೆ.

ಸಾಮಾನ್ಯವಾಗಿ ಭಾರತೀಯರು ವೇದ ಉಪನಿಷತ್ತು ಭಗವದ್ಗೀತೆ ಇವುಗಳನ್ನು ಪವಿತ್ರ ಶಾಸ್ತ್ರಗ್ರಂಥಗಳೆಂದು ಗೌರವಿಸುತ್ತಾರೆ. ಸಾಧಕನಿಗೆ ಅವುಗಳ ಸಾಮಾನ್ಯ ಪರಿಚಯ ಆವಶ್ಯಕ. ಆದರೆ ಶಾಸ್ತ್ರವೆಂದರೆ ಕೇವಲ ಗ್ರಂಥ ಸಮುದಾಯಗಳು ಮಾತ್ರವಲ್ಲ. ವ್ಯಕ್ತಿ ವ್ಯಕ್ತಿಯ ಹೃತ್ಕಮಲದಲ್ಲಿರುವ ಸನಾತನವಾದ ಅರಿವನ್ನೂ ಶಾಸ್ತ್ರವೆಂದು ಪರಿಗಣಿಸಬೇಕು. ಯಾವುದಾದರೊಂದು ಗ್ರಂಥವನ್ನಾಗಲಿ ಗ್ರಂಥಗಳನ್ನಾಗಲಿ ಶಾಸ್ತ್ರವೆಂದು ಭಾವಿಸಿ ಅವುಗಳ ನಿಯಮಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಯೋಗಸಾಧನೆ ಮಾಡಬೇಕೆಂಬುದು ಶ್ರೀ ಅರವಿಂದರ ಆದೇಶವಲ್ಲ. ಯಾರು ಭಗವಂತನನ್ನು ಇಚ್ಛಿಸುತ್ತಾರೋ ಅವರನ್ನು ಭಗವಂತನು ಸ್ವೀಕರಿಸುತ್ತಾನೆ, ಎಂಬುದು ಅವರ ಅಚಲ ನಂಬಿಕೆ. ಪ್ರತಿಯೊಬ್ಬರಲ್ಲಿಯೂ ಪರಮಗುರು ಸ್ಥಿತನಾಗಿದ್ದಾನೆ. ಅವನ ವಾಣಿಯೇ ಪರಮಶಾಸ್ತ್ರ. ಸಾಧಕನು ವೇದ, ಉಪನಿಷತ್ತು, ಗೀತೆ ಮೊದಲಾದ ಪವಿತ್ರ ಗ್ರಂಥಗಳಿಂದ ಬೆಳಕನ್ನು ಪಡೆಯಬೇಕೇ ವಿನಾ ಅವುಗಳಿಂದ ಬಂಧಿತನಾಗಬಾರದು. ಅಂತಹ ಬಂಧನಕ್ಕೆ ಸಿಕ್ಕಿದರೆ, ಆ ಗ್ರಂಥ ಹೆಚ್ಚು, ಈ ಮತ ಹೆಚ್ಚು, ಆ

ನುತ ಶ್ರೇಷ್ಠ ಎಂಬ ಸ್ಪರ್ಧೆಗೆ ಕಾರಣವಾಗುತ್ತದೆ. ಸಾಕ್ಷಾತ್ಕಾರವೆಂಬುದು ಶಬ್ದಬ್ರಹ್ಮಕ್ಕಿಂತ ಅತೀತವಾದುದು. ಹೀಗೆಂದ ಮಾತ್ರಕ್ಕೆ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಗೌರವ ನಂಬಿಕೆಗಳಿರಬಾರದೆಂದಲ್ಲ. ಮುಖ್ಯವಾಗಿ ಯಾವ ಗ್ರಂಥಕ್ಕೂ ದಾಸರಾಗಬಾರದು. ಶ್ರೀ ಅರವಿಂದರ ಸಮನ್ವಯದಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಹೆಚ್ಚಿನ ಸ್ವಾತಂತ್ರ್ಯವಿದೆ. ಸ್ವಭಾವಕ್ಕನುಗುಣವಾದ ಮಾರ್ಗದಲ್ಲಿ ಸಾಧಕರು ಮುಂದುವರಿಯುತ್ತಾರೆ. ಪ್ರತಿಯೊರ್ವನೂ ತನಗನುರೂಪವಾದ ಯೋಗಮಾರ್ಗವನ್ನು ರೂಪಿಸಬೇಕು, ಯೋಜಿಸಬೇಕು—ಎಂಬುದು ಶ್ರೀ ಅರವಿಂದರ ಸಂದೇಶ. ಜಗತ್ತಿನ ಎಲ್ಲ ಶಾಸ್ತ್ರ ಗ್ರಂಥಗಳು ಜ್ಞಾನದ ಅಂಶ. ಪೂರ್ಣಯೋಗದಲ್ಲಿ ಸಾಧಕನು ಪಾಂಡಿತ್ಯ ಪಡೆವುದರಲ್ಲಿಯೇ ತುಷ್ಟನಾಗುವುದಿಲ್ಲ; ಅವನು ಅನಂತವನ್ನೇ ಸಾಧಿಸುವವನು.

ಭಗವಂತನ ಕೃಪೆಗೆ, ಸಾಕ್ಷಾತ್ಕಾರಕ್ಕೆ, ಅಭೀಪ್ಸೆಯೇ ಕ್ರತುಶಕ್ತಿ. ಅಭೀಪ್ಸೆ ಇಲ್ಲದಿದ್ದರೆ ಈ ಯೋಗದಲ್ಲಿ ಮುಂದುವರಿಯಲು ಸಾಧ್ಯವಿಲ್ಲ. ಈ ಅಭೀಪ್ಸೆಯನ್ನು ಕುಗ್ಗದಂತೆ ರಕ್ಷಿಸುವ ಶಕ್ತಿ ಉತ್ಸಾಹ. ಉತ್ಸಾಹವಿದ್ದರೆ, ಹೃದಯದಲ್ಲಿ ಸ್ಥಿತನಾದ ಭಗವಂತನೇ ಸಾಧಕನೂ ಸಾಧ್ಯನೂ ಆಗುವುದಲ್ಲದೆ, ಯೋಗದ ಸಮಸ್ತ ಹೊರೆ ಹೊಣೆಗಳನ್ನೂ ಅವನೇ ಭರಿಸುತ್ತಾನೆ. ಸೋಲು ಗೆಲುವುಗಳಿಂದ ಚಂಚಲಚಿತ್ತರಾಗದೆ, ಉತ್ಸಾಹದಿಂದ ಮಾಡುವ ಕರ್ಮವೆ, ಯೋಗದಲ್ಲಿ ಪ್ರಗತಿಯತ್ತ ಕರದೊಯ್ಯುತ್ತದೆ.

ಸಮನ್ವಯ ಯೋಗದಲ್ಲಿ ಹೃದಯದಲ್ಲಿ ಸ್ಥಿತನಾದ ಗುರುವೆ ನಿಜವಾದ ಗುರು. ನರಗುರು ನಿಮಿತ್ತ ಮಾತ್ರ, ಸಚ್ಚಿದಾನಂದವೆ ಗುರು. ಹೀಗೆಂದ ಮಾತ್ರಕ್ಕೆ ನರಗುರುವನ್ನು ಅಲಕ್ಷಿಸಿದವರಲ್ಲ ಶ್ರೀ ಅರವಿಂದರು. ಗುರುವಾದವರು ತಮ್ಮ ಆಚಾರ, ಬೋಧನ

ಹಾಗೂ ವರ್ಚಸ್ಸಿನಿಂದ ತಮ್ಮ ಶಿಷ್ಯರ ಜೀವನದ ಮೇಲೆ ಉತ್ತಮ ಪ್ರಭಾವ ಬೀರಲು ಸಮರ್ಥರಾಗಬೇಕು. ಉತ್ತಮ ಗುರು, ತನ್ನ ವ್ಯಕ್ತಿಪೂಜೆಗೆ ಪ್ರೋತ್ಸಾಹ ನೀಡುವುದಿಲ್ಲ. ಶಿಷ್ಯನ ಹೃದಯದಲ್ಲಿ ಅಂತರ್ಯಾಮಿಯಾಗಿರುವ ಗುರುವಿನ ಅನುಸಂಧಾನಕ್ಕೇ ಅಂತಹ ಗುರು ಪ್ರೋತ್ಸಾಹ ನೀಡುವುದು. ಗುರುವಿನ ಶೀಲ ಶಿಷ್ಯರ ಮೇಲೆ ಪ್ರಭಾವ ಬೀರುತ್ತದೆ. ಯಾವ ಗುರುವಾಗಲಿ ಬಾಹ್ಯ ಅಧಿಕಾರದಿಂದ ಶಿಷ್ಯರನ್ನು ತರಪೇತು ಮಾಡುವುದು ಸಾಧ್ಯವಿಲ್ಲ. ಆತ್ಮಾನುಭವದ ಸಮಸ್ತ ಐಶ್ವರ್ಯವನ್ನು ಶಿಷ್ಯನಿಗೆ ಸಮರ್ಪಿಸುವುದೇ ಸದ್ಗುರುವಿನ ಸಾರ್ವಭೌಮ ಲಕ್ಷಣ. ಎಚ್ಚರಗೊಳ್ಳದ ಸಹೋದರರನ್ನು ಎಚ್ಚರಿಸುವಂತಿರುತ್ತದೆ ಗುರುವಿನ ಮಾರ್ಗ. ಮಾನವ ಗುರುವಿನ ಸಹಾಯದಿಂದ ಸಾಧಕ, ಕಡೆಗೆ ಮಾರ್ಗದರ್ಶನ ಪಡೆಯುವುದು ಹೃದಯದಲ್ಲಿರುವ ಗುರುವಿನಿಂದಲೆ. ಈ ಭಾವನೆ ಇಲ್ಲದಿದ್ದರೆ, ನನ್ನ ಗುರು, ನನ್ನ ಮಠ ಎಂಬ ಸ್ವಾಭಿಮಾನ ಮತ್ತು ಅಹಂಕಾರಗಳಿಗೆ ಸಿಕ್ಕಿ ನರಳಬೇಕಾಗುತ್ತದೆ.

ಸಾಧಕನಿಗೆ ಸಿದ್ಧಿ ಲಭಿಸಲು ಕಾಲ ಬೇಕು, ಭಗವತ್ ಕೃಪೆ ಬೇಕು. ಈ ಕಾಯುವ ಕೆಲಸ, ಅಹಂಕಾರ ಮತಿಗೆ ಕಠೋರವಾಗಿ ಕಾಣಬಹುದು. ಆದರೆ ನಿರಹಂಕಾರಿಯಾದ ಸಾಧಕನಿಗೆ, ಹುಟ್ಟು ಮತ್ತು ಸಾವುಗಳು ಆತ್ಮಯಾತ್ರಾ ಪಥದಲ್ಲಿರುವ ನಿಲ್ದಾಣಗಳಾಗುತ್ತವೆ. ಸಾಧನಪಥದಿಂದ ಜಾರಿದರೂ ಪುನಃ ಎಚ್ಚೆತ್ತು ಮುನ್ನಡೆಯುತ್ತಾನೆ ಸಮನ್ವಯ ಯೋಗ ಸಾಧಕ.

ಸಮನ್ವಯ ಯೋಗಸಾಧಕನಿಗೆ ತನ್ನಲ್ಲಿರುವ ದುರ್ದಮ್ಯ ನಿಮ್ನ ಶಕ್ತಿಗಳ ಪರಿಚಯವಾಗುತ್ತದೆ. ಆಗ ಒಂದು ರೀತಿಯ ಹೋರಾಟ ನಡೆಯುತ್ತದೆ. ಯೋಗಮಾರ್ಗವೇ ಬೇಡವೆಂಬ ಭಾವನೆ ಬರಬಹುದು! ಶತಶತಮಾನಗಳಿಂದ ಗುಡಿಸಿ ಶುಚಿ

ಗೊಳಿಸದ ಮನೆಯನ್ನು ಗುಡಿಸಿ, ಶುಚಿಗೊಳಿಸಲು ಹೊರಟಾಗ ಭಯಂಕರ ಧೂಳಿದ್ದು, ಗುಡಿಸುವುದೇ ಬೇಡವೆಂಬ ನಿರಾಶೆ ಮೂಡುವುದು ಸಹಜ. ಆದರೆ ಉದ್ಧಾರದ ದೃಷ್ಟಿಯಿಂದ ಶುಚಿಗೊಳಿಸುವುದು ಆವಶ್ಯಕ. ಶುಚಿ ಕಾರ್ಯಕ್ಕೆ ಹೊರಟಾಗ ಧೂಳೇಳುವುದೂ ಸಹಜ. ಸಾಧಕನು ಯೋಗಸಾಧನೆಗೆ ತೊಡಗಿದಾಗ ದುಷ್ಟಶಕ್ತಿಗಳನ್ನು ಎದುರಿಸಬೇಕಾಗುತ್ತದೆ, ಅವುಗಳ ಮೇಲೆ ವಿಜಯ ಸ್ಥಾಪನೆ ಮಾಡಬೇಕಾಗುತ್ತದೆ. ಪ್ರಜ್ಞೆಯ ಸಮಸ್ತ ಸ್ತರಗಳ ಅರಿವಾಗುವುದು ಸಾಧಕನಿಗೆ ಅನಿವಾರ್ಯ. ಯೋಗಸಾಧನೆ ಸ್ವಾರ್ಥಕ್ಕಲ್ಲ, ಭಗವಲ್ಲಾಭಕ್ಕಾಗಿ, ದಿವ್ಯ ಜ್ಞಾನಕ್ಕಾಗಿ, ಪ್ರಜ್ಞೆಯ ಪರಿವರ್ತನೆಗಾಗಿ, ಸಮಷ್ಟಿಯ ಹಿತಕ್ಕಾಗಿ ಎಂಬ ಅರಿವಾಗುತ್ತದೆ ಸಮನ್ವಯ ಯೋಗಸಾಧಕನಿಗೆ. ಸಮತೆ, ಶಾಂತಿ, ಸುಖ, ಆನಂದಗಳು ಅವನ ಬಾಳಿನ ಉಸಿರಾಗುತ್ತವೆ. ಕ್ರಮೇಣ ಸಾಧಕನು ಮಂಗಳ ಅಮಂಗಳ, ಪ್ರಿಯ ಅಪ್ರಿಯ ಮೊದಲಾದ ದ್ವಂದ್ವಗಳನ್ನು ಸಮಾನವಾಗಿ ಕಾಣುವ ಶಕ್ತಿ ಪಡೆಯುತ್ತಾನೆ. ಕ್ರಮೇಣ ಅವನ ದೇಹ, ಪ್ರಾಣ ಮನಸ್ಸುಗಳು ಅತಿಮಾನಸದ ಅವತರಣಕ್ಕೆ ಸಿದ್ಧವಾಗುತ್ತವೆ. ಧಾರಣಾಶಕ್ತಿಯನ್ನು ಪಡೆಯದಿದ್ದರೆ, ಆಧ್ಯಾತ್ಮಿಕ ಶಕ್ತಿಯನ್ನು ಗ್ರಹಣಮಾಡಲಾರದೆ ಜರ್ಝರಿತ ಕಾಯರಾಗುವ ಸಂಭವವಿದೆ. ದೈವೀಶಕ್ತಿಯ ಅವತರಣಕ್ಕೆ ದೇಹವೂ ಸಶಕ್ತವಾಗುವುದು ಆವಶ್ಯಕ.

ಸಮನ್ವಯ ಯೋಗದಲ್ಲಿ ಸ್ಥಿತನಾದ ಸಾಧಕನು, ತನ್ನ ಕರ್ಮಕ್ಷೇತ್ರದಿಂದ ಪಲಾಯನಮಾಡಬೇಕೆಂದು ಶ್ರೀ ಅರವಿಂದರು ಹೇಳಲಿಲ್ಲ. ಜೀವನದ ಸಮಸ್ಯೆಗಳನ್ನು ಎದುರಿಸಲಾರದವನು ಯೋಗಮಾರ್ಗದ ಸಮಸ್ಯೆಗಳನ್ನು ಹೇಗೆತಾನೆ ಎದುರಿಸಬಲ್ಲ? ಎಂದು ವಾಸ್ತವಿಕ ದೃಷ್ಟಿಯಿಂದ ಜೀವನವನ್ನು ಸಮೀಕ್ಷಿಸಿದ

ದಿಟ್ಟತನ ಅವರದು. ಜೀವನದ ಕಠಿನ ಸಮಸ್ಯೆಗಳನ್ನು ಶಾಂತಭಾವದಿಂದಲೂ ಧೈರ್ಯದಿಂದಲೂ ಎದುರಿಸಬೇಕೆಂಬುದು ಅವರ ಧೀರವಾಣಿ. ಶಾಂತಿ, ಸ್ಥಿರತೆ, ಅಚಂಚಲತೆ, ನಿಶ್ಚಲ ನೀರವತೆ– ಈ ಶಕ್ತಿಗಳಿಂದ ಜಗತ್ತಿನ ನಿಮ್ನ ಶಕ್ತಿಗಳನ್ನು ಪರಿವರ್ತಿಸಿ ಅತಿಮಾನಸವನ್ನು ಪೃಥ್ವಿಯಲ್ಲಿ ಸ್ಥಾಪಿಸುವುದು ಸಾಧ್ಯವೆಂಬುದು ಅವರ ಅಭಯ ಸಂದೇಶ.

## ದಿವ್ಯಜೀವನ (Life Divine)

ದಿವ್ಯಜೀವನ ಶ್ರೀ ಅರವಿಂದರ ಮೇರುಕೃತಿ. ಶ್ರೀ ಅರವಿಂದರು ತಮ್ಮ ದರ್ಶನವನ್ನು ತರ್ಕಬದ್ಧವಾಗಿ, ವಿಚಾರಪೂರ್ವಕವಾಗಿ, ಯೌಗಿಕ ಬೆಳಕಿನಿಂದ ರೂಪಿಸಿದ ಬೃಹದ್‌ಗ್ರಂಥವಿದು. ಈ ಭವ್ಯ ಕೃತಿಯನ್ನು ಓದಿದ ಬಳಿಕ ಶ್ರೀ ಕುವೆಂಪು "ಬುದ್ಧಿತಿಮಿರಂ ಮಾಣ್ದುದಿನ್ನೆನಗೆ" ಎಂದು ಅಭಿನಂದಿಸಿದ್ದಾರೆ. ಇದು ತಾತ್ವಿಕ ಗ್ರಂಥವಾದರೂ ಅನುಭಾವ ಸಾಹಿತ್ಯ, ಕಾವ್ಯದೃಷ್ಟಿಯಿಂದ ಸಮೀಕ್ಷಿಸಿದರೆ, ಇದೊಂದು ಯೌಗಿಕ ಗದ್ಯ ಕಾವ್ಯ. ಈ ಕೃತಿಯ ಕೆಲವು ಪುಟಗಳನ್ನು ಓದಿದರೂ ಸಹ, ಹೊಸ ಅನುಭವವಾಗುತ್ತದೆ, ಚೇತನದ ವಲಯ ವಿಸ್ತೃತವಾಗುತ್ತದೆ. ಈ ಕೃತಿ ನವ ಯುಗದ ಸೌಭಾಗ್ಯ, ನವ ಜೀವನದ ದೀಪಧಾರಿ. ಪ್ರಾಚ್ಯ ಮತ್ತು ಪಾಶ್ಚಿಮಾತ್ಯ ದರ್ಶನಗಳ ಸಮನ್ವಯ ಮಾತ್ರವಲ್ಲದೆ, ಜಗತ್ತಿನ ಮಾನವ ಕುಲದ ಪರಿವರ್ತನೆಗೆ ಸ್ಪರ್ಶಮಣಿಯಾಗಿದೆ ಈ ಕೃತಿ. ಯೋಗಸಾಧನೆಯ ಆಂತರಿಕ ಸಾಹಸದ ಬಹುಕ್ಷೇತ್ರಗಳ ಚಿತ್ರಣವನ್ನು ಕೊಡುವ ಈ ಮಹಾಕೃತಿಯ ಅಧ್ಯಯನಕ್ಕೆ ಸಾಕಷ್ಟು ಕಾಲ ಹಿಡಿಸುತ್ತದೆ. ಆದರೆ ಆ ಪ್ರವಾಸದಿಂದ ಚೈತನ್ಯಕ್ಕೆ ನವಶಕ್ತಿ ಬರುತ್ತದೆ. ಓದುಗನು ದೈವೀಭಾವದಿಂದ ಪ್ರಫುಲ್ಲ

ನಾಗುತ್ತಾನೆ. ಆ ದಿವ್ಯಕೃತಿಯ ರೇಖಾಚಿತ್ರವನ್ನು ಮುಂದೆ ಕೊಟ್ಟಿದೆ.

ಸತ್ಯದ ಸಾಕ್ಷಾತ್ಕಾರಕ್ಕಾಗಿ, ಆನಂದದ ದೀಪ್ತಿಗಾಗಿ, ಅಮೃತ ಲಾಭಕ್ಕಾಗಿ ಸಹಸ್ರಾರು ವರ್ಷಗಳಿಂದ ಮಾನವನು ಹಾರೈಸು ತ್ತಿದ್ದಾನೆ. ಎಂದಾದರೊಂದು ದಿನ ಆ ಅಮೃತತ್ವವನ್ನೂ ದಿವ್ಯ ಜೀವನದ ಭಾಸ್ವರ ಮಹಿಮೆಯನ್ನೂ ಪಡೆವೆನೆಂಬುದು ಅವನ ಕನಸು. ಅವುಗಳನ್ನು ಪಡೆಯಲೆಂದೇ ಮಾನವ ಇಹದಲ್ಲಿ ಯಾತ್ರಿ ಯಾಗಿರುವುದು. ಮೃತ್ಯುಛಾಯೆಯಿಂದ ಆವೃತವಾದ ಈ ಜಗತ್ತಿನಲ್ಲಿ ಅಮೃತತ್ವವನ್ನು ಬಯಸುವುದು ಹಾಸ್ಯಾಸ್ಪದವಾಗಿ ಕಾಣಬಹುದು. ಆದರೆ ಮಾನವ ಕಲ್ಪನೆ ಯುಗಯುಗದಲ್ಲಿ ಮಾನವನ ಅಮರ ಸ್ವರೂಪವನ್ನು ಸಾರುತ್ತ ಬಂದಿದೆ. ಆ ಸಿದ್ಧಿ ಶೈಲವನ್ನೇರುವ ಮಾನವ ಕುಲದ ವಿರಾಟ್ ಅಭೀಪ್ಸೆ ಚಿರ ಜಾಗ್ರತವಾಗಿದೆ.

ಜಡದಲ್ಲಿ ಪ್ರಾಣ, ಪ್ರಾಣದಲ್ಲಿ ಮನಸ್ಸು–ಇವುಗಳನ್ನು ಗುರು ತಿಸಿದ್ದಾಗಿದೆ ಜಗತ್ತಿನ ವಿಕಾಸ ಪಥದಲ್ಲಿ. ವಿಕಾಸವಾದ, ಒಂದು ರೀತಿಯ ವೈಜ್ಞಾನಿಕ ವಿವರಣೆ. ಜಡ ಮತ್ತು ಪ್ರಾಣಗಳಲ್ಲಿ ಪ್ರಜ್ಞೆ ಸಂವೃತವಾಗಿದೆ—ಎಂಬುದು ವೇದಾಂತದ ದೃಷ್ಟಿ. ವಿಕಾಸ ವಾದದ ದೃಷ್ಟಿಯಿಂದ ಸಮೀಕ್ಷಿಸಿದರೂ ಮುಂದೆ ಮಹತ್ವಪೂರ್ಣ ವಾದ ದಿವ್ಯಜೀವನ ಪ್ರತಿಷ್ಠಾಪನೆಯಾಗಲಿದೆ ಪೃಥ್ವಿಯಲ್ಲಿ. ಪಶುವಿನಿಂದ ಮಾನವನ ಉದಯವಾಗಲು ಸಹಸ್ರಾರು ವರ್ಷ ಗಳಾದುವು. ಮುಂದೆ ಸಮಸ್ತ ಮಾನವಕೋಟಿ ದಿವ್ಯಜೀವನದಲ್ಲಿ ಸ್ಥಿತವಾಗಲು, ಎಷ್ಟು ಕಾಲ ವಿಶ್ವಪ್ರಕೃತಿಗೆ ಬೇಕೋ ಹೇಳುವುದು ಕಷ್ಟ. ದಿವ್ಯ ಜೀವನಕ್ಕೇರುವುದೇ ಮಾನವನ ಪರಮ ಪುರ ಷಾರ್ಥವೆಂಬುದು ಮಾನವನಿಗೆ ಹೇಗೋ ಅರಿವಾಗಿದೆ. ಜಗತ್ತಿನ

ಮಹಾಪುರುಷರನೇಕರು ತಾವು ಕಂಡ ದಿವ್ಯಜೀವನಪಥವನ್ನು ತೋರಿ ಹೋಗಿದ್ದಾರೆ.

ಪರಬ್ರಹ್ಮನು ಮೃಣ್ಮಯದಲ್ಲಿ ಚಿನ್ಮಯ ಪುರುಷ. ಅವನು ಸಕಲ ಜೀವರಾಶಿಗಳನ್ನು ಸೃಷ್ಟಿಸುವುದು ಈ ಜಡದಿಂದಲೇ. ಈ ಜಗತ್ತು ಅವನ ಬೃಹತ್ ಕಾರ್ಯಾಗಾರ, ಪ್ರಯೋಗಶಾಲೆ. ಉಪನಿಷತ್ತಿನ ಋಷಿಗಳು ಅನ್ನವೇ ಬ್ರಹ್ಮವೆಂದರು, ಆನಂದವು ಬ್ರಹ್ಮನೆಂದರು. ಅನ್ನವೆಂದರೆ ಜಡ. ಜಡದಲ್ಲಿ ಬ್ರಹ್ಮದ ಗುಪ್ತ ವ್ಯಾಪ್ತಿಯನ್ನು ಸಂದರ್ಶಿಸಿತು ಪ್ರಾಚೀನ ಋಷಿಗಳ ಪ್ರತಿಭೆ.

ಸಾಂಖ್ಯತತ್ತ್ವದಲ್ಲಿ ಪುರುಷ ಮತ್ತು ಪ್ರಕೃತಿ ತತ್ತ್ವಗಳ ಮೂಲಕ ಈ ವಿಶ್ವದ ರಹಸ್ಯವನ್ನು ವಿವರಿಸುವ ಪ್ರಯತ್ನ ನಡೆದಿದೆ. ಪುರುಷನೆ ಪರಬ್ರಹ್ಮ, ಅವನು ತಟಸ್ಥ, ಅವನ ಕ್ರಿಯಾಶಕ್ತಿಯೇ ಪ್ರಕೃತಿ. ಶಂಕರಾಚಾರ್ಯರು ತಮ್ಮ ಅದ್ವೈತ ಸಿದ್ಧಾಂತದಲ್ಲಿ ಬ್ರಹ್ಮ, ಜಗತ್ತು, ಮಾಯೆ ಎಂಬ ಮೂರು ತತ್ತ್ವಗಳ ಮೂಲಕ ಪರಮ ರಹಸ್ಯವನ್ನು ವಿವರಿಸಿದರು. ಜಡವಾದಿಗಳು ಬ್ರಹ್ಮತತ್ತ್ವವನ್ನು ಬಿಟ್ಟು ಕೇವಲ ಜಗತ್ತನ್ನೆ ಸತ್ಯವೆಂದು ಭಾವಿಸಿದ್ದಾರೆ. ಅವರ ದೃಷ್ಟಿಯಲ್ಲಿ ಮನುಷ್ಯನ ಪ್ರಗತಿ ಅನಿಶ್ಚಿತ. ಪ್ರಾಚೀನ ಋಷಿಗಳು ಈ ವಿಶ್ವ, ಬ್ರಹ್ಮನಿಂದಲೆ ಆವಿರ್ಭವಿಸಿತೆಂದರು. ಯಾವುದು 'ಏಕಂ ಸತ್' ಆಗಿದೆಯೋ ಅದೇ 'ಬಹುಧಾ' ಆಗಿದೆಯೆಂದು ಅವರ ದರ್ಶನ; ಪರಬ್ರಹ್ಮದಿಂದ ಈ ಜಗತ್ತು ಹೊಮ್ಮಿರುವುದರಿಂದ, ಜಡದಲ್ಲಿಯೂ ಅಸೀಮ ಶಕ್ತಿ ವ್ಯಾಪಿಸಿರುವ ಸಿದ್ಧಾಂತವನ್ನು ಸಾರಿದ್ದಾರೆ, ಪ್ರಯೋಗಿಸಿ ತೋರಿದ್ದಾರೆ. ಈ ಎಲ್ಲ ದೃಷ್ಟಿಗಳನ್ನು ಸಮನ್ವಯ ಮಾಡಿದರೆ ಜಡ, ಪ್ರಾಣ, ಮನಸ್ಸು—ಇವು ಮೂರೂ ವಿಶ್ವಶಕ್ತಿಯಿಂದಲೆ ಹೊರಹೊಮ್ಮಿದುವೆಂಬುದು ಖಚಿತವಾಗು

ತ್ತದೆ. ಈ ಸೃಷ್ಟಿಯ ಹಿನ್ನೆಲೆಯಲ್ಲಿ ವಿಶ್ವಶಕ್ತಿಯ ಇಚ್ಛೆ ಸಂಕಲ್ಪಗಳಿವೆ. ಆ ವಿಶ್ವಶಕ್ತಿಯನ್ನೇ ಬ್ರಹ್ಮ, ದೇವರು, ಭಗವಂತ ಎಂದು ಕರೆಯುವುದು.

ಇಂದು ವಿಜ್ಞಾನಿಯ ದೃಷ್ಟಿ ಜಡಶಕ್ತಿಯ ಮೇಲೆ ಪ್ರಭುತ್ವ ವನ್ನು ಪಡೆವತ್ತ ಸಾಗಿದೆ. ದೇಶಕಾಲಗಳು ವಿಜ್ಞಾನಿಯ ಸಾಧನೆ ಯಿಂದ ಸಂಕುಚಿತವಾಗಿವೆ. ಒಬ್ಬ ವಿಜ್ಞಾನಿಯ ಸಂಶೋಧನೆಯ ಫಲ ಸಮಸ್ತ ಮಾನವಕುಲಕ್ಕೆ ಇಂದು ದೊರಕುವಂತಾಗಿದೆ. ವಿಜ್ಞಾನಿ ಮೂಲಭೂತವಾದ ಭಾಗವತ ಸತ್ಯವನ್ನು ಅರಿಯದೆ, ಮಂದಗತಿಯಲ್ಲಿ ಸಾಗುತ್ತಿದ್ದಾನೆ. ಜಡವಾದಿಯಾದ ವಿಜ್ಞಾನಿಗೆ ಜಡವೇ ಏಕಮಾತ್ರ ಸತ್ಯ. ಅವನ ದೃಷ್ಟಿಯಲ್ಲಿ ದೇವರಿಗೆ ಅಸ್ತಿತ್ವವಿಲ್ಲ. ಸಂನ್ಯಾಸಿಗೆ ಏಕಮಾತ್ರ ಸತ್ಯವೆಂದರೆ ದೇವರು ಅಥವಾ ಆತ್ಮ. ಅವನ ದೃಷ್ಟಿಯಲ್ಲಿ ವ್ಯಾವಹಾರಿಕ ಜಗತ್ತು, ಇಂದ್ರಿಯ ಮತ್ತು ಮನಸ್ಸುಗಳ ಕಲ್ಪನೆ. ವಿಜ್ಞಾನಿಗೆ ಜಡ ಜಗತ್ತೇ ಸತ್ಯ; ಸಂನ್ಯಾಸಿಗೆ ಆತ್ಮವೇ ಸತ್ಯ. ಈ ಎರಡು ದೃಷ್ಟಿಗಳ ಸಮನ್ವಯ ಹೇಗೆ? ಜಡವಾದಿ ಸ್ಥೂಲ ದೇಹದಲ್ಲಿ ಸೂಕ್ಷ್ಮದೇಹವೂ ಸ್ಥೂಲ ಇಂದ್ರಿಯದಲ್ಲಿ ಸೂಕ್ಷ್ಮ ಇಂದ್ರಿಯವೂ ಇರುವುದನ್ನು ಮರೆತಿದ್ದಾನೆ. ಜಡವು ಕೇವಲ ಜಡವಲ್ಲ, ಅದರ ಲ್ಲಿಯೂ ಆತ್ಮತತ್ತ್ವವಿದೆ–ಎಂಬುದನ್ನು ಸಂನ್ಯಾಸಿ ಗಮನಿಸಿಲ್ಲ. ವಿಜ್ಞಾನಿ ಮತ್ತು ಸಂನ್ಯಾಸಿ–ಇವರಿಬ್ಬರ ದೃಷ್ಟಿ ವಿಶಾಲವಾದರೆ ಜಡ ಮತ್ತು ಆತ್ಮ ಎರಡೂ ಸತ್ಯವೆಂಬ ಅರಿವು ಮೂಡುತ್ತದೆ.

ಈಚೆಗೆ ಮನಶ್ಶಾಸ್ತ್ರಜ್ಞರು ಮಾನವನಲ್ಲಿ ವಿಶ್ವ ಚೇತನ (Cosmic Consciousness)ದ ಆವಿರ್ಭಾವವಾಗುವ ಸಾಧ್ಯತೆ ಯನ್ನು ಒಪ್ಪಿಕೊಂಡಿದ್ದಾರೆ. ಭಾರತೀಯರಿಗೆ ಪ್ರಾಚೀನ ಕಾಲ ದಲ್ಲಿಯೆ ವಿಶ್ವಚೇತನದ ಅಸ್ತಿತ್ವ ಅರಿವಾಯಿತು. ವ್ಯಕ್ತಿಯಲ್ಲಿ

ವಿಶ್ವಚೇತನದ ಅವತರಣವಾದರೆ ಆವನ ಜೀವನವೆಲ್ಲ ಪರಿವರ್ತಿತ ವಾಗುತ್ತದೆ. ಆಗ ಅಹಂಕಾರಕ್ಕೆ ಅಗೋಚರವಾದ ಸೃಷ್ಟಿಯ ಅಖಂಡತೆಯನ್ನು ಕಾಣುವ ದೈವೀಪ್ರಜ್ಞೆ ಉದಿಸುವುದು. ವಿಶ್ವ ಚೇತನದ ದೃಷ್ಟಿಯಲ್ಲಿ ಜಡ ಮತ್ತು ಚಿತ್ ಇವೆರಡೂ ಭಿನ್ನವಲ್ಲ. ಉಪನಿಷತ್ತಿನ ಋಷಿಗಳು ಅಸತ್ತಿನಿಂದ ಸತ್ ಉದಯವಾಗಿ, ಸತ್ ಪುನಃ ಅಸತ್ತಿನಲ್ಲಿ ಲೀನವಾಗುತ್ತದೆ ಎಂದು ಹೇಳಿದ್ದಾರೆ. ಅಸತ್ ಎಂಬುದು ಸತ್ತಿನ ಒಂದು ಸೂಕ್ಷ್ಮರೂಪ. ಈ ಸತ್ ಮತ್ತು ಅಸತ್‌ಗಳ ಹಿಂದೆ ಇರುವ ಏಕಮೇವಾದ್ವಿತೀಯವಾದ ಒಂದು ಶಕ್ತಿಯನ್ನು ಬ್ರಹ್ಮವೆಂದರು. ಈ ಬ್ರಹ್ಮದ ಸ್ವರೂಪ ಅನಿರ್ವಚನೀಯ. ಅದರ ಸ್ವರೂಪಕ್ಕೆ ಪರಿಸೀಮೆಯನ್ನು ರಚಿಸು ವುದು ಅಸಾಧ್ಯ. ಆ ಪರಬ್ರಹ್ಮವನ್ನು ಜೀವನದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಜೀವನದ ಗುರಿ ಎಂಬುದು ಪ್ರಾಚೀನ ಋಷಿಗಳ ದರ್ಶನ.

ಜೀವ, ಜಗತ್ತು, ಬ್ರಹ್ಮ–ಈ ಮೂರಕ್ಕೂ ಸತ್ಯಸಂಬಂಧವಿದೆ ನಮ್ಮ ಅವಿದ್ಯಾ ವಿಕೃತ ದೃಷ್ಟಿಯಿಂದ ಈ ಸತ್ಯ ಮುಚ್ಚಿ ಹೋಗಿದೆ. ಅದ್ವೈತ ದೃಷ್ಟಿಯಲ್ಲಿ ಬ್ರಹ್ಮವು ನಿತ್ಯಶುದ್ಧ, ನಿತ್ಯಮುಕ್ತ, ಪ್ರಶಾಂತ, ನಿರ್ವಿಕಾರ ಮತ್ತು ಅನಂತ; ಜಗತ್ತೆಂಬುದು ಅವಿದ್ಯಾಭೂಮಿಕೆ; ಅವಿದ್ಯೆಯಿಂದ ಪಾರಾಗು ವುದೇ ಆತ್ಮಸಾಕ್ಷಾತ್ಕಾರ. ಅದ್ವೈತವಾದ ಕಡೆಗೆ ಬದ್ಧರೂ ಇಲ್ಲ, ಮುಕ್ತರೂ ಇಲ್ಲ, ಮುಕ್ತಿಗಾಗಿ ಯತ್ನಿಸುವವರೂ ಇಲ್ಲ ಎಂಬ ತರ್ಕಕ್ಕೆ ನಮ್ಮನ್ನು ಸಿಕ್ಕಿಸಿಬಿಡುತ್ತದೆ. ಈ ತರ್ಕ ಸರಣಿಯಿಂದ ತಪ್ಪಿಸಲು ಶ್ರೀ ಅರವಿಂದರು ಜೀವ, ಜಗತ್ತು, ಬ್ರಹ್ಮ–ಈ ಮೂರು ತತ್ತ್ವಗಳನ್ನು ಒಪ್ಪಿಕೊಂಡು, ಜಗತ್ತು ಅವಿದ್ಯಾಭೂಮಿಕೆಯೆಂದಾಗಲಿ ಮಿಥ್ಯೆಯೆಂದಾಗಲಿ ತಿರಸ್ಕರಿ

ಸುವುದಿಲ್ಲ. ಜಡವೆಂದು ಕಾಣುವ ವಸ್ತುವಿನಲ್ಲಿಯೂ ಬ್ರಹ್ಮದ ಋತಮಯ ಛಂದೋರಹಸ್ಯವಿದೆ ಎನ್ನುತ್ತಾರೆ ಅವರು. ಅಪ್ರಮೇಯ ಶಕ್ತಿ ಜಡದಲ್ಲಿಯೂ ನಿಗೂಢವಾಗಿದೆ. ಜೀವ ಮತ್ತು ಜಗತ್ತು ತನ್ನ ಸಾಕ್ಷಾತ್ಕಾರಕ್ಕಾಗಿ ಯಾತ್ರಿಯಾಗಿದೆ ಈ ವಿಶ್ವದಲ್ಲಿ. ಸಚ್ಚಿದಾನಂದಸ್ವರೂಪವಾದ ಬ್ರಹ್ಮವೇ, ಅತಿಮಾನಸ, ಮಾನಸ, ಚೈತ್ಯಪುರುಷ, ಪ್ರಾಣ, ಮತ್ತು ಜಡವಾಗಿ




ಅವತರಿಸಿರುವುದು. ಇಂದು ಜಡದಿಂದ ಅತಿಮಾನಸಕ್ಕೇರುವುದೇ ಜೀವದ ಗುರಿ. ಅತಿಮಾನಸದಲ್ಲಿ ಮಾನವರು ಸ್ಥಿತರಾದಾಗ ದಿವ್ಯ ಜೀವನ, ಪ್ರಪಂಚದಲ್ಲಿ ಪ್ರತಿಷ್ಠಿತವಾಗುತ್ತದೆ. ಆ ದಿವ್ಯಜೀವನದ ಉದಯಕ್ಕೆ ದೀಪಧಾರಿಯಾಗಿದೆ ಶ್ರೀ ಅರವಿಂದರ ಮೇರುಕೃತಿ 'ದಿವ್ಯಜೀವನ.'

## ಸಾವಿತ್ರಿ

ಶ್ರೀ ಅರವಿಂದರ ಮೇರುಕೃತಿ 'ದಿವ್ಯಜೀವನ' ಗದ್ಯ ಮಹಾ ಕಾವ್ಯವಾದರೆ, 'ಸಾವಿತ್ರಿ' ಅವರ ಪದ್ಯ ಮಹಾಕಾವ್ಯ. ಮಹಾ

ಕಾವ್ಯ ಯಾವ ಯೌಗಿಕ ಎತ್ತರಕ್ಕೇರಬಹುದೆಂಬುದನ್ನು ಇಲ್ಲಿ ಸಂದರ್ಶಿಸಬಹುದು. ಇದೊಂದು ಪ್ರತಿಮಾಕಾವ್ಯ. ಸುಮಾರು ೨೪,೦೦೦ ಪಾದಗಳಷ್ಟು ವಿಸ್ತೃತವಾಗಿದೆ ಈ ಬೃಹತ್ ಕಾವ್ಯ ವಾಲ್ಮೀಕಿ ರಾಮಾಯಣವು ೨೪,೧೦೦ ಶ್ಲೋಕಗಳಿಂದ ಕೂಡಿದ್ದೆಂಬ ಪ್ರತೀತಿ ಇರುವುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು.

ತನ್ನ ಪಾತಿವ್ರತ್ಯದಿಂದ ಸಾವಿತ್ರಿ ಯಮನನ್ನು ಗೆದ್ದ ಕಥೆ, ಭಾರತದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ತಿಳಿದ ಕಥೆ. ಶ್ರೀ ಅರವಿಂದರು ತಮ್ಮ ಕಾವ್ಯದಲ್ಲಿ ಮಾನವ ಮನಸ್ಸಿನ ಋಜು ಕುಟಿಲ ಪಥಗಳನ್ನೆಲ್ಲ, ಗುರುತಿಸಿ, ಮಾನವನ ಉತ್ತರಾಯಣ ಪಥವನ್ನು ಗುರುತಿಸಿದ್ದಾರೆ, ಈ ದಿವ್ಯ ಕಾವ್ಯದಲ್ಲಿ.

ಪ್ರತಿಮಾ ರೂಪವಾದ ದಿವ್ಯ ಪ್ರಾತಃಕಾಲದಿಂದ ಆರಂಭವಾಗುತ್ತದೆ ಈ ಮಹಾಕಾವ್ಯ. ದೇವತೆಗಳು ಎಚ್ಚರಾಗುವ ಮೊದಲು, ಕಾಲಗರ್ಭದಲ್ಲಿ ಇನ್ನೂ ಅಂಧಕಾರ ಕವಿದಿರುವಾಗ, ಯಾವುದೋ ಸ್ಮೃತಿಯ ಸ್ಪಂದನವಾಯಿತು. ಬೆಳಗಾಯಿತು. ಪ್ರೇಮದ ಸಾಕಾರಮೂರ್ತಿ ಸಾವಿತ್ರಿ ಅಂದು ಎದ್ದಳು. ಜಗತ್ತಿನ ಅಭೀಪ್ಸೆಯ ಪ್ರತೀಕವಾಗಿ ಆವಳು ಅಶ್ವಪತಿ ರಾಜನ ಮಗಳಾಗಿ ಜನ್ಮಧಾರಣೆ ಮಾಡಿದ್ದಳು. ಅಶ್ವಪತಿ ಪೂರ್ಣ ಸ್ವಾತಂತ್ರ್ಯಕ್ಕಾಗಿ ಯತ್ನಿಸುತ್ತಿದ್ದ ಸಾಧಕ. ಸ್ವಸ್ವರೂಪದ ಅನುಸಂಧಾನದಲ್ಲಿ ತೊಡಗಿದ ಅಶ್ವಪತಿಗೆ ಸಾವಿತ್ರಿ ಮಗಳಾಗಿ ಜನಿಸಿದ್ದಳು. ಅಶ್ವಪತಿಗೆ ಬಹು ಪ್ರೀತಿಯ ಮಗಳಾದಳು.

ಸಾವಿತ್ರಿ ಬೆಳೆದು ಸರ್ವವಿದ್ಯೆಯಲ್ಲಿಯೂ ಪರಿಣತಳಾದಳು. ಸತ್ಯವಾನನೊಡನೆ ವಿವಾಹವಾಗಿ ಹನ್ನೆರಡು ತಿಂಗಳುಗಳು ಕಳೆಯುತ್ತ ಬಂದುವು. ಸತ್ಯವಾನನು ಸಾವನ್ನಪ್ಪುವ ದಿನವೂ

ಬಂತು. ಅವಳ ಪ್ರೇಮಪೂರ್ಣ ಹೃದಯವನ್ನು ಭಗವಂತನೇ ನೋಡಿದನು. ಅವಳ ಹೃದಯ ವಿಶ್ವಕ್ಕಿಂತ ವಿಶಾಲವಾಗಿರುವುದು ಅವನಿಗೆ ತಿಳಿಯಿತು. ಸತ್ಯವಾನನ ಮೃತ್ಯುರೂಪದ ಮಹಾ ಪ್ರಪಾತದ ಎದುರು ಅವಳು ಧೃತಿಗೆಡದೆ, ದೇವತೆಯಂತೆ ಪ್ರಶಾಂತ ವಾಗಿದ್ದಳು. ಅವಳಿಗೆ ತಿಳಿಯಿತು, ಪ್ರಾರ್ಥನೆ, ಮಹಾಕಾರ್ಯ, ಮಹಾಭಾವ – ಇವು ಮಾನವನನ್ನು ಚಿತ್‌ಶಕ್ತಿಯೊಡನೆ ಸೇರಿಸುವ ಸಾಧನವೆಂದು! ಭಗವತಿಯ ವರಪ್ರಸಾದದಿಂದ ಜಗತ್ತಿನ ನಿರ್ದಯ ಕಠೋರ ನಿಯತಿಯನ್ನು ಮಾರ್ಪಡಿಸಲು ಅವಳು ಯೋಚಿಸಿದಳು. ಅವಳ ಅಂತರಾತ್ಮದಲ್ಲಿ ಶಕ್ತಿ ಮೊಳೆಯಿತು, ಬೆಳೆಯಿತು. ಮಹಾಯೋಗದ ಹಲವು ಭೂಮಿಕೆ ಗಳ ಅನುಭವಗಳನ್ನು ಪಡೆದ ಅವಳ ಚೇತನ ಸಚ್ಚಿದಾನಂದದಲ್ಲಿ ಲೀನವಾಯಿತು. ಆ ಯೋಗಭೂಮಿಕೆಯಿಂದ ಹೊರಬಂದ ಬಳಿಕ ಅವಳು ಸಂಪೂರ್ಣವಾಗಿ ಪರಿವರ್ತಿತಳಾದಳು, ಆನಂದಮಯ ಳಾದಳು. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಅನುಭೂತಿಯಲ್ಲಿ ಅವಳು ಸ್ಥಿತಳಾದಳು.

"ಪರಾತ್ಪರಶಕ್ತಿ, ವಿಶ್ವದೆಲ್ಲೆಡೆಯಲ್ಲಿ ವ್ಯಾಪ್ತ" ಎಂಬ ಕಾಲದೇಶಾತೀತವಾದ ರಸಾನುಭೂತಿಯ ಸಾಕ್ಷಾತ್ಕಾರದಲ್ಲಿ ಅವಳು ತನ್ಮಯಳಾದಳು. ಸತ್ಯವಾನನು ಜಗತ್ತನ್ನು ತ್ಯಜಿಸ ಬೇಕಾದ ಕಡೆಯ ದಿನವೂ ಬಂದಿತು. ಅತ್ತೆಯ ಅಪ್ಪಣೆ ಪಡೆದು ಅರಣ್ಯಕ್ಕೆ ಹೊರಟ ಪತಿಯೊಡನೆ, ಸಾವಿತ್ರಿಯೂ ಹೊರಟಳು. ಅರಣ್ಯದ ಮರ ಗಿಡ ಬಳ್ಳಿ ಹೂವುಗಳು ದಂಪತಿಗಳನ್ನು ಆಕರ್ಷಿ ಸಿದವು. ಅಂದು ಬರಲಿರುವ ಕಠೋರ ಕ್ಷಣವನ್ನು ಅವಳು ನೆನೆಯ ತೊಡಗಿದಳು. ಸತ್ಯವಾನನು ಸೌದೆಗಾಗಿ ಮರ ಕಡಿಯಲು ತೊಡಗಿದನು. ಮೃತ್ಯು ಸನ್ನಿಹಿತವಾಗುತ್ತಿದ್ದುದು ಸತ್ಯವಾನನಿಗೆ

ತಿಳಿಯಲಿಲ್ಲ. ಮರ ಕಡಿಯುವ ಕೆಲಸ ಮುಗಿಸಿ ಏಕೋ ಆಯಾಸವಾಗುತ್ತಿರುವುದೆಂದು ಅವನು ನುಡಿದನು. ಸಾವಿತ್ರಿ ಅವನನ್ನು ತನ್ನ ಕೋಮಲ ಬಾಹುಗಳಲ್ಲಿ ಆಲಿಂಗಿಸಿ ತನ್ನ ತೊಡೆಯಮೇಲೆ ಮಲಗಿಸಿಕೊಂಡಳು. ಅವಳ ತೋಳ ತೆಕ್ಕೆಯನ್ನು ಗಮನಿಸದೆ, ಅವನ ಪ್ರಾಣಪಕ್ಷಿ ಹಾರಿಹೋಯಿತು.

ಅರಣ್ಯದ ನಿರ್ಜನತೆ ಹಾಗೂ ಕ್ರೂರ ಮೌನದ ನಡುವೆ ಪರಿತಪಿಸುತ್ತಿದ್ದ ಸಾವಿತ್ರಿಯ ಎದೆಯ ಮೇಲೆ ಸತ್ಯವಾನನ ಕಳೇಬರ! ಭಯಂಕರ ಪರಿಸ್ಥಿತಿಯಲ್ಲಿ ಕೆಲವು ನಿಮಿಷ ದಿಕ್ಕು ತೋಚದೆ ಹೋದರೂ ಸಾವಿತ್ರಿ ಬೇಗನೆ ಶಕ್ತಿಯನ್ನು ಪಡೆದಳು. ಸತ್ಯವಾನನ ಕಳೇಬರವನ್ನು ಭೂಮಿಯ ಮೇಲೆ ಮಲಗಿಸಿ ಎದ್ದು ನಿಂತಳು.

ಮೃತ್ಯು ಕಾಣಿಸಿಕೊಂಡು, "ಸಾವಿತ್ರಿ, ನಿನ್ನ ದೈವೀಪ್ರಭಾವವನ್ನು ಸೆಳೆದುಕೊಂಡು ಶವವನ್ನು ಬಿಟ್ಟು ಬಿಡು; ಕೆಲವು ದಿನಗಳವರೆಗೆ ಅತ್ತು ಗೋಳಾಡಿ, ಬಳಿಕ ಮರೆತುಬಿಡು; ಮರ್ತ್ಯ ಜೀವನದಲ್ಲಿ ಬದುಕು ಹೋಗು" ಎಂದು ನುಡಿದನು.

ಸಾವಿತ್ರಿ ಉತ್ತರಕೊಡುವ ಸ್ಥಿತಿಯಲ್ಲಿರಲಿಲ್ಲ. ಅವಳು ಮೌನವಾಗಿಯೇ ಇದ್ದಳು. ಮೃತ್ಯುದೇವತೆಯ ನುಡಿಗಳನ್ನು ಸಾಕ್ಷಿಯಾಗಿ ಆಲಿಸಿದಳು.

"ಸಾವಿತ್ರಿ, ನೀನೂ ಕೂಡ ಒಂದು ದಿನ ಪತಿಯಂತೆಯೆ ಸಾಯುವವಳು. ನಿನ್ನ ಪತಿ ಅಮರನೆಂದು ತಿಳಿದೆಯಾ? ನಿನ್ನ ಪ್ರಭಾವವನ್ನು ಸೆಳೆದುಕೋ ನಿನ್ನ ಪತಿಯನ್ನು ಬಿಟ್ಟುಬಿಡು" ಎಂದು ಮೃತ್ಯು ನುಡಿದನು.

ಸಾವಿತ್ರಿಯ ಅಂತರಿಕ ಶಕ್ತಿ ಕ್ರಿಯಾರೂಪವಾಗಿ ಕೆಲಸ ಮಾಡಲು ತೊಡಗಿತು. ಸತ್ಯವಾನನ ಕಳೇಬರದಿಂದ ಜ್ಯೋತಿ

ಮೃತ್ಯು ಸತ್ಯವಾನನು ಹೊರಬಂದನು. ಸತ್ಯವಾನ, ಮೃತ್ಯು, ಸಾವಿತ್ರಿ–ಮೂವರೂ ಅವ್ಯಕ್ತ ಮೌನದತ್ತ ಚಲಿಸಿದರು. ಸ್ವಲ್ಪ ದೂರ ಹೋದ ಬಳಿಕ, ಸತ್ಯವಾನ ತನ್ನ ವಿಶಾಲ ನೇತ್ರಗಳಿಂದ ಸಾವಿತ್ರಿಯನ್ನು ನೋಡಿದನು. ಆಗ, ಮೃತ್ಯು ಸಾವಿತ್ರಿಯತ್ತ ನೋಡಿ,

"ಮರ್ತ್ಯಳೆ, ಹಿಂತಿರುಗು, ಮೃತ್ಯುವಿನ ಗೃಹವನ್ನು ಪ್ರವೇಶಿಸಬೇಡ. ಮರ್ತ್ಯದ ಸೀಮೆಯನ್ನು ಉಲ್ಲಂಘಿಸಬೇಡ" ಎಂದು ಗದರಿಸಿದನು.

ಸಾವಿತ್ರಿ ಮರುಮಾತನಾಡದೆ ಮುನ್ನಡೆದಳು. ಸ್ವಲ್ಪ ದೂರ ಹೋದ ಬಳಿಕ,

"ನೀನಿಷ್ಟು ದೂರ ಬಂದುದೇ ನಿಯಮಕ್ಕೆ ವಿರುದ್ಧ. ಮಾನವ, ಕಾಲಕ್ಕೆ ಅಧೀನ. ದೇವರು, ಸ್ವರ್ಗ, ಎಲ್ಲವೂ ಮಾನವ ಕಲ್ಪನೆ. ಮಾನವನ ಎಲ್ಲ ಸಾಹಸಗಳಿಗೂ ಮೃತ್ಯುವೇ ಅಂತ್ಯ. ಹೋಗು, ಎಲ್ಲರಂತೆ ಪ್ರಪಂಚದಲ್ಲಿ ಬದುಕು. ಸತ್ಯವಾನನನ್ನು ನೀನು ಪಡೆಯಲಾರೆ. ಅವನಿಗೆ ಬದಲಾಗಿ ಇತರ ವರಗಳನ್ನು ಕೊಡುತ್ತೇನೆ" ಎಂದನು ಮೃತ್ಯು.

ಅದುವರೆಗೆ ಮಾತನಾಡುತ್ತಿದ್ದ ಸಾವಿತ್ರಿ, "ದುರ್ಬಲರಂತೆ ಅಲ್ಪದಲ್ಲಿ ತೃಪ್ತಳಲ್ಲ ನಾನು. ಸತ್ಯವಾನ ಆಶಿಸಿದ್ದನ್ನು ಪಡೆವುದೇ ನನ್ನ ಅಭಿಲಾಷೆ" ಎಂದಳು.

"ಹಾಗೆಯೆ ಆಗಲಿ, ಸತ್ಯವಾನನ ತಂದೆ ಕಳೆದುಕೊಂಡ ರಾಜ್ಯಕೋಶಗಳು ಪುನಃ ಲಭಿಸುತ್ತವೆ. ನೀನಾಗಲೆ ಮರ್ತ್ಯರ ಸೀಮೆಯನ್ನು ದಾಟಿ ಬಹುದೂರ ಬಂದಿರುವೆ." ಎಂದನು ಮೃತ್ಯು.

"ಇಲ್ಲ ಹೋಗಲಾರೆ. ಸತ್ಯವಾನನೊಡನೆ ಭಗವಂತನಲ್ಲಿ ಲೀನಳಾಗುತ್ತೇನೆ."

"ನೀನು ಮರ್ತ್ಯಳೆಂಬುದನ್ನು ಏಕೆ ಮರೆತಿರುವೆ? ನಾನು ಸೃಷ್ಟಿ ಕರ್ತ, ನಾನೇ ಸೃಷ್ಟಿಯನ್ನು ಲಯಮಾಡುವವನು. ನೀನಿನ್ನು ಹೊರಡು. ನನ್ನ ಕೋಪಕ್ಕೆ ಬಲಿಯಾಗಬೇಡ."

"ನನ್ನ ದೇವರು ಪ್ರೇಮ. ಪ್ರೇಮವೇ ಸ್ವರ್ಗ ಮರ್ತ್ಯಗಳ ಬಂಧು! ಪ್ರೇಮವೇ ಪರಮಪುರುಷನ ಕರುಣಾ ಸಿಂಧು!!"

ಮೃತ್ಯು ಸತ್ಯವಾನನನ್ನು ಬಿಟ್ಟು ಇತರ ಯಾವ ವಸ್ತುವನ್ನಾದರೂ ಕೊಡಲು ಒಪ್ಪಿದನು. ಸಾವಿತ್ರಿಯ ನಿಶ್ಚಲ ಪ್ರೇಮ; ಸತ್ಯವಾನನೊಬ್ಬನನ್ನೇ ಆಶಿಸಿತು. ಅವಳನ್ನು ಪರಿಪರಿಯಾಗಿ ಸಂತೈಸಲು ಯತ್ನಿಸಿದ ಮೃತ್ಯುವಿನ ಪ್ರಯತ್ನಗಳೆಲ್ಲ ವಿಫಲವಾದುವು. ಸಾವಿತ್ರಿಯ ಪ್ರೇಮದ ಮುಂದೆ ಮೃತ್ಯುವಿನ ವಾದಗಳು ನಿಂತವು. ಮೃತ್ಯುವನ್ನು ಗೆದ್ದು ಸಾವಿತ್ರಿ ಧರೆಗಿಳಿದಳು. ಅವಳಲ್ಲಿ ಅಜೇಯ ಶಕ್ತಿಯ ಆವಿರ್ಭಾವವಾಗಿತ್ತು.

ಸಾವಿತ್ರಿಯ ತೊಡೆಗಳ ಮೇಲೆ ಮಲಗಿದ್ದ ಸತ್ಯವಾನ ಕಣ್ತೆರೆದು, "ಸಾವಿತ್ರಿ, ಎಲ್ಲಿಂದ ನನ್ನನ್ನು ಸೆಳೆದು ತಂದೆ?" ಎಂದು ಕೇಳಿದನು.

"ನಮ್ಮ ಅಗಲ್ಕೆಕೆ ಕೇವಲ ಕನಸಿನಂತೆ!" ಎಂದಳು ಸಾವಿತ್ರಿ.

"ಸಾವಿತ್ರಿ, ನೀನೀಗ ಮರ್ತ್ಯಳಲ್ಲ. ಕಾಲವೇ ನಿನ್ನ ಪಾದಾಕ್ರಾಂತವಾಗಿದೆ."

"ನಾನು ಮರ್ತ್ಯಳಾದರೂ ಎಲ್ಲವೂ ಪರಿವರ್ತಿತವಾಗಿದೆ. ನಮ್ಮ ಆನಂದವನ್ನು ಜಗತ್ತಿಗೂ ನೀಡೋಣ. ಸಂಜೆಯಾಗುತ್ತ ಬಂತು."

ಸಾವಿತ್ರಿ ಸತ್ಯವಾನರು ಮಾತನಾಡುತ್ತ ತಮ್ಮ ನಿವಾಸಕ್ಕೆ ಹಿಂತಿರುಗಿದರು. ಸತ್ಯವಾನನ ತಂದೆ ದ್ಯುಮತ್ಸೇನನಿಗೆ ಕಣ್ಣು ಬಂದಿತ್ತು. ರಾಜ್ಯಕೋಶಗಳೆಲ್ಲ ಅವನಿಗೆ ಲಭಿಸಿದ್ದುವು. ದ್ಯುಮ

ತ್ಸೇನ ದಂಪತಿಗಳು ಅಲೌಕಿಕ ವೈಭವದಿಂದ ಕಾಂತಿಯುಕ್ತರಾದ ಮಗನನ್ನೂ ಸೊಸೆಯನ್ನೂ ಪ್ರೀತಿಯಿಂದ ಆಲಿಂಗಿಸಿ ಸ್ವಾಗತಿಸಿದರು.

— ಇದು ಒಟ್ಟಿನಲ್ಲಿ ಶ್ರೀಅರವಿಂದರ ಸಾವಿತ್ರಿ ಕಾವ್ಯದ ಕಥಾಸಾರದ ರೇಖಾಚಿತ್ರ.

ಶ್ರೀಅರವಿಂದರು ವ್ಯಾಸ ಭಾರತದ ಅರಣ್ಯಪರ್ವದಲ್ಲಿ ಬರುವ ಸಾವಿತ್ರಿಯ ಕಥೆಯನ್ನೇ ಆಧಾರವಾಗಿಟ್ಟುಕೊಂಡು ತಮ್ಮ ಪ್ರತಿಭೆಯಿಂದ ಯೌಗಿಕ ಕಾವ್ಯವನ್ನಾಗಿಸಿದ್ದಾರೆ, 'ಸಾವಿತ್ರಿ' ಕಾವ್ಯವನ್ನು. ಯೌಗಿಕಾನುಭವಗಳ ಭವ್ಯಚಿತ್ರಗಳು ಈ ಕಾವ್ಯದಲ್ಲಿ ಮೂರ್ತಿವೆತ್ತಿವೆ. ಕಾವ್ಯದೃಷ್ಟಿಯಿಂದ, ದರ್ಶನ ದೃಷ್ಟಿಯಿಂದ, ಈ ಕೃತಿ ಭುವನದ ಭಾಗ್ಯ.

## ೪. ಪೂರ್ಣಯೋಗ

ಸೃಷ್ಟಿಯ ಉದ್ದೇಶವೇನು? ಜೀವದ ರಹಸ್ಯವೇನು? ದೇವರು ಯಾರು? ಅವನ ಶಕ್ತಿಗಳಾವುವು? ಜೀವಕ್ಕೂ ದೇವರಿಗೂ ಇರುವ ಸಂಬಂಧವಾವುದು? ದಿವ್ಯಜೀವನವೆಂದರೇನು?—ಇಂತಹ ಪ್ರಶ್ನೆಗಳು ಮಾನವರನ್ನು ಕಾಡುತ್ತಲೇ ಬಂದಿವೆ. ಪ್ರಾಚೀನ ಯೋಗಗಳು ಮುಕ್ತಿಯೇ ಜೀವನದ ಗುರಿ ಎಂದು ಸಾರಿದವು. ಶ್ರೀ ಅರವಿಂದರ ಯೋಗದಲ್ಲಿ ಕೇವಲ ಮುಕ್ತಿಯಲ್ಲ ಗುರಿ, ಸಂಪತ್ತಿ. ಅಂದರೆ ಭಗವಂತನ ಆಶಯವನ್ನು ಈ ಸೃಷ್ಟಿಯಲ್ಲಿ ಪೂರ್ಣಗೊಳಿಸುವುದು ಅಜ್ಞಾನ, ಮೃತ್ಯು, ಕಷ್ಟಕ್ಲೇಶಗಳಿಂದ ಆವರಿಸಿದ ಈ ಜಗತ್ತನ್ನು ಪರಿವರ್ತಿಸುವುದೇ ಈ ಯೋಗದ ಉದ್ದೇಶ. ಮನಸ್ಸು, ಪ್ರಾಣ, ದೇಹ—ಎಲ್ಲವೂ ದೈವೀಕವಾಗಿ ಪರಿವರ್ತಿತವಾಗಬೇಕು. ಅದೇ ಪೂರ್ಣಯೋಗ.

ಇಂದು ಮಾನವ ಏಳು ರೀತಿಯ ಅಜ್ಞಾನಗಳಲ್ಲಿ ಸಿಕ್ಕಿಕೊಳಲುತ್ತಿದ್ದಾನೆ. ಭಗವಂತನ ವಿಚಾರವಾಗಿ ಯೋಚಿಸದಿರುವುದೇ ಮೊದಲ ಅಜ್ಞಾನ. ಕಾಲ ದೇಶಾತೀತವಾದ, ನಿರ್ಗುಣ ಸ್ವರೂಪವಾದ ಆತ್ಮಜ್ಞಾನಕ್ಕಾಗಿ ಯತ್ನಿಸದಿರುವುದು ಎರಡನೆಯ ವ್ಯಾಪಕ ಅಜ್ಞಾನ. ನಾನು ನನ್ನದು, ಎಂಬ ಅಹಂಕಾರದಲ್ಲಿ ಸಿಕ್ಕಿ ಅದೇ ಸರ್ವಸ್ವವೆಂದು ತಿಳಿಯುವುದು ಅಹಂಕಾರಮೂಲವಾದ ಮೂರನೆ ಅಜ್ಞಾನ. ಕಾಲ ದೇಶಗಳ ವಜ್ರಪಂಜರದಲ್ಲಿ ಸಿಕ್ಕಿದ ಜೀವ, ಈ ಲೋಕವೆ ಆದಿ, ಮಧ್ಯ, ಅಂತ್ಯವೆಂದು ತಿಳಿಯುವುದು ನಾಲ್ಕನೆಯ ಲೌಕಿಕ ಅಜ್ಞಾನ. ನಮ್ಮ ಪ್ರಜ್ಞೆಯ ಸ್ತರಗಳನ್ನು ಅರಿಯದಿರುವುದು ಆರನೆ ಅಜ್ಞಾನ. ಈ ಅಜ್ಞಾನಗಳ ವಕ್ರ ಪಥದಲ್ಲಿ ಸಂಚರಿಸುತ್ತ ದಿವ್ಯಜೀವನಕ್ಕಾಗಿ ಯತ್ನಿಸದಿರುವುದೇ ಏಳನೆಯದಾದ ಪ್ರಾಯೋಗಿಕ ಅಜ್ಞಾನ. ಈ ಅಜ್ಞಾನಗಳ ಬಂಧನಗಳಿಂದ ಪಾರಾಗಲು ಯೋಗಮಾರ್ಗ ಮಾನವರಿಗೆ ಆವಶ್ಯಕ.

ಪ್ರಪಂಚದ ಗತಿಯಲ್ಲಿ ವಿಕಾಸ ಕಾಣುತ್ತಿದೆ. ಅನುಭವಗಳ ಪರಂಪರೆಯಿಂದ ಮಾನವ ಪೂರ್ಣತೆಯ ಕಡೆಗೆ ಸಾಗುತ್ತಿದ್ದಾನೆ. ಬಹಿರ್ಮುಖ ಸಾಹಸದಂತೆ ಅಂತರ್ಮುಖ ಸಾಹಸವೂ ವ್ಯಕ್ತಗೋರುತ್ತಿದೆ. ಭಾರತದ ಹಲವು ರೀತಿಯ ಯೋಗಸಾಧನೆಗಳು ಈ ಅಂತರ್ಮುಖ ಸಾಹಸಕ್ಕೆ ಸಾಕ್ಷಿಯಾಗಿವೆ. ಪ್ರಪಂಚದ ಇತರ ದೇಶಗಳಲ್ಲಿಯೂ ಈ ಸಾಧನೆ ನಡೆದಿದೆ. ಆದರೆ ಭಗವದನುಭೂತಿಗಾಗಿ ಭಾರತದಲ್ಲಿ ನಡೆದಷ್ಟು ಸಾಧನೆ ಇತರ ದೇಶಗಳಲ್ಲಿ ಕಾಣುವುದು ದುರ್ಲಭ. ಭಾರತೀಯರ ಆಧ್ಯಾತ್ಮಿಕ ಸಾಧನೆಯ ಫಲವಾಗಿ ಹಲವು ಯೋಗಪಥಗಳು ನಿರ್ಮಿತವಾದವು. ಅವುಗಳ ಕಿಂಚಿತ್ ಅವಲೋಕನ ಆವಶ್ಯಕ.

ಹಠಯೋಗ, ರಾಜಯೋಗ, ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳು ಭಾರತೀಯರ ಯೋಗಗಳಲ್ಲಿ ಮುಖ್ಯವಾದುವು. ಮಾನವ ಶರೀರದ ರಹಸ್ಯಗಳನ್ನು ಅರಿತು, ಮಾನವ ಶರೀರದ ಶಕ್ತಿವರ್ಧನೆ ಮತ್ತು ರೋಗವಿದೂರತೆಯನ್ನು ಸಾಧಿಸುವ ಸಾಧನಗಳೇ ಹಠಯೋಗದ ಮುಖ್ಯ ಆದರ್ಶ. ಆಸನ ಪ್ರಾಣಾಯಾಮಾದಿ ರೀತಿಗಳಿಂದ ಹಠಯೋಗಿ ತನ್ನ ಶರೀರವನ್ನು ನಿರೋಗವಾಗಿಯೂ ಶಕ್ತಿಯುತವಾಗಿಯೂ ಮಾಡಬಲ್ಲ. ಆದರೆ ಮಾನವನ ಮನಸ್ಸಿನ ಪರಿವರ್ತನೆಯ ಕಡೆಗೆ ಹಠಯೋಗ ತನ್ನ ದೃಷ್ಟಿ ಹರಿಸಲಿಲ್ಲ.

ರಾಜಯೋಗದಲ್ಲಿ ದೇಹ ಮತ್ತು ದೇಹಶಕ್ತಿಗಳ ವಿಚಾರಕ್ಕಿಂತ ಮನಸ್ಸು ಮತ್ತು ಚಿತ್ತವೃತ್ತಿ ನಿರೋಧಕ್ಕೇ ಹೆಚ್ಚಿನ ಪ್ರಾಶಸ್ತ್ಯ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ–ಇವೇ ಈ ಯೋಗದ ಅಷ್ಟಾಂಗಗಳು. ಚಿತ್ತವೃತ್ತಿ ನಿರೋಧದಿಂದ ಶಾಂತಮನಸ್ಸನ್ನು ಪಡೆಯುವುದೇ ಈ ಯೋಗದ ಉದ್ದೇಶ. ಮಾನವನಲ್ಲಿ ಸ್ಥಿತವಾಗಿರುವ ನಿಮ್ನ ಪ್ರವೃತ್ತಿಗಳ ಪರಿವರ್ತನೆಯ ವಿಚಾರ ಈ ಯೋಗದಲ್ಲಿ ಬರುವುದಿಲ್ಲ.

ಮನುಷ್ಯನ ಕ್ರಿಯಾಶಕ್ತಿ, ಜ್ಞಾನಶಕ್ತಿ, ಭಕ್ತಿಗಳನ್ನು ಅವಲಂಬಿಸಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳೆಂಬ ಮೂರು ಯೋಗಗಳು ರೂಪಿತವಾದವು. ಮಾನವ ಮನಸ್ಸಿನ ಆಲಸ್ಯವನ್ನು ಕಳೆದು ಕ್ರಿಯಾಶೀಲನನ್ನಾಗಿ ಮಾಡುವುದೇ ಕರ್ಮಯೋಗ. ಈ ಯೋಗದಲ್ಲಿ ಫಲಾಪೇಕ್ಷೆ ಇಲ್ಲದ ಕರ್ಮಕ್ಕೇ ಪ್ರಾಶಸ್ತ್ಯ. ಅಹಂಕಾರ ನಿರಸನಕ್ಕೆ ಈ ಯೋಗ ಉಪಯುಕ್ತ. ಈ ಯೋಗದಲ್ಲಿ ಪ್ರಾಣಮಯ ಮತ್ತು ಮನೋಮಯಗಳ ಪರಿವರ್ತನದ ವಿಚಾರಕ್ಕೆ ಪ್ರಾಶಸ್ತ್ಯವಿಲ್ಲ.

ಎಲ್ಲ ಆಲೋಚನೆಗಳನ್ನೂ ಭಗವಂತನತ್ತ ಹರಿಸುತ್ತಾನೆ. ಜ್ಞಾನಯೋಗಿ. ಅವನಲ್ಲಿ ವಿಚಾರಕ್ಕೆ, ಬುದ್ಧಿಯ ತೀಕ್ಷ್ಣತೆಗೆ ವಿಶೇಷ ಸ್ಥಾನ. ಎಲ್ಲವನ್ನೂ ಅವನು ವಿಚಾರಮಾಡುತ್ತಾನೆ, ಸತ್ಯ ಮಿಥ್ಯೆಗಳನ್ನು ಅವನು ವಿಭಜಿಸುತ್ತಾನೆ. ಆದರೆ ಭಾವ, ಕರ್ಮಗಳತ್ತ ಅವನು ವಿಶೇಷ ಆಸಕ್ತಿ ವಹಿಸುವುದಿಲ್ಲ.

ಭಕ್ತಿಯೋಗದಲ್ಲಿ ಭಾವಕ್ಕೆ. ಹೃದಯ ಸಂವೇದನೆಗೆ ವಿಶೇಷ ಪ್ರಾಮುಖ್ಯತೆ. ಪ್ರೇಮದಿಂದ ಭಗವಂತನ ಸಾಕ್ಷಾತ್ಕಾರಕ್ಕೆ ತೊಡಗುತ್ತಾನೆ ಭಕ್ತ. ಅವನ ದೃಷ್ಟಿ ಕರ್ಮ. ಜ್ಞಾನಗಳತ್ತ ಹರಿಯುವುದು ಕಡಿಮೆ.

ಶ್ರೀ ಅರವಿಂದರು ಕರ್ಮ, ಜ್ಞಾನ, ಭಕ್ತಿ—ಈ ಮೂರು ಯೋಗಗಳನ್ನೂ ಸಮನ್ವಯ ಮಾಡಿದ್ದಾರೆ. ಮಾನಸದಿಂದ ಅತಿಮಾನಸಕ್ಕೇರುವುದೇ ಪೂರ್ಣಯೋಗದ ಗುರಿ. ಅತಿಮಾನಸ ವನ್ನು ವೈದಿಕ ಋಷಿಗಳು 'ಋತಚಿತ್' ಎಂದು ಕರೆದರು. ತೈತ್ತಿರೀಯ ಉಪನಿಷತ್ತಿನಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ–ಎಂಬ ಪಂಚ ಕೋಶಗಳ ಉಲ್ಲೇಖವಿದೆ. ಅತಿಮಾನಸವೆಂಬುದು ವಿಜ್ಞಾನ ಮಯ ಕೋಶಕ್ಕೆ ಸಂವಾದಿಯಾದುದು. ಪ್ರಕೃತಿಯಲ್ಲಿಗುವ ಚಿಚ್ಛಕ್ತಿಯಿಂದ ಈ ವಿಕಾಸ ನಡೆಯುತ್ತದೆ. ಜಡದಿಂದ ಪ್ರಾಣ, ಪ್ರಾಣದಿಂದ ಮನಸ್ಸು ಉದಯವಾಗಿದೆ. ಮುಂದೆ ಮಾನಸದಿಂದ ಅತಿಮಾನಸಕ್ಕೇರುವುದೇ ಮಾನವವಿಕಾಸದ ಮುಂದಿನ ನಿಲ್ದಾಣ. ಜಗತ್ತಿನ ಆಧ್ಯಾತ್ಮಿಕ ವಿಕಾಸವನ್ನು ಅವಲೋಕಿಸಿದರೆ, ಅಲ್ಲಲ್ಲಿ ಕೆಲವರು ಈ ಎತ್ತರಕ್ಕೆ ಏರಿರುವುದು ವೇದ್ಯವಾಗುತ್ತದೆ. ಸಮಸ್ತ ಮಾನವಕೋಟಿಯೇ ಆ ಎತ್ತರಕ್ಕೇರುವುದು ಈ ಸೃಷ್ಟಿಯ ಉದ್ದೇಶ. ಆ ಉದ್ದೇಶ ಸಫಲವಾಗಲು, ಆ ಕಾರ್ಯವನ್ನು ಪ್ರಕೃತಿಗೇ ಬಿಟ್ಟರೆ ಬಹುಕಾಲ ಹಿಡಿಸುತ್ತದೆ.

ಈ ಯೋಗದಲ್ಲಿ ಪ್ರಪ್ರಥಮವಾಗಿ ಅಭೀಪ್ಸೆಯಿಂದ ಸಾಧಕನು ಅಚಂಚಲಮನಸ್ಸನ್ನು ಪಡೆದು, ಸರ್ವವನ್ನೂ ಭಗವಂತನಿಗೆ ಸಮರ್ಪಿಸುವ ಸಂಕಲ್ಪ ಮಾಡಬೇಕು. ಅಭೀಪ್ಸೆ, ಅಚಂಚಲ ಮನಸ್ಸು, ಸಮರ್ಪಣ—ಇವು ಮೂರು ಸಾಧಕನ ದೀಪಧಾರಿಗಳು. ಮನುಷ್ಯನ ಪ್ರಾಣಮಂಡಲದಲ್ಲಿ ಆಶೆಯ ಬಿರುಗಾಳಿ ಏಳುತ್ತಿರುತ್ತದೆ. ಅಂತಹ ಸಮಯದಲ್ಲಿ ಭಗವಂತನನ್ನು ಸಂಪೂರ್ಣವಾಗಿ ನೆಚ್ಚಬೇಕು. ಕಷ್ಟಗಳನ್ನು ಎದುರಿಸಲು ತಿತಿಕ್ಷೆ, ಸಹನೆಗಳು ಸಹಾಯಕ. ವ್ಯಕ್ತಿ ತನ್ನ ಅಹಂಕಾರದಿಂದಲೆ ಹೋರಾಡುವವರೆಗೆ ಕ್ಲೇಶಗಳು ಮುತ್ತುತ್ತಿರುತ್ತವೆ. ದೈವೀಶಕ್ತಿ ನಮ್ಮ ಜೀವನ ಸೂತ್ರಗಳನ್ನು ಹಿಡಿದು ದಾರಿ ತೋರುವವರೆಗೆ ಕಷ್ಟಗಳಿರುವುದು ಸಹಜ. ಭಗವಂತನು ನಮ್ಮ ಹೃದಯದಲ್ಲಿ ಸ್ಥಿತನಾದರೆ ಎಲ್ಲ ಮೋಹಗಳೂ ಮಾಯವಾಗುತ್ತವೆ.

ಸಾಧಕನು ತನ್ನ ಸಾಧನೆಯಲ್ಲಿ ಮುಂದುವರಿದಂತೆ ಭಗವಂತನೆ ಈ ವಿಶ್ವದ ಸೂತ್ರಧಾರನೆಂಬ ಅನುಭೂತಿ ಲಭಿಸುತ್ತದೆ. ಸಾಧಕನಲ್ಲಿ ಬಹು ಮುಖ್ಯವಾದುದು ಸಮರ್ಪಣ. ಸಮರ್ಪಣ ಪೂರ್ಣವಾದಂತೆ ಸಾಕ್ಷೀ ಪ್ರಜ್ಞೆ ಲಭಿಸುತ್ತದೆ. ಸಮರ್ಪಣವೆಂದರೆ ಸಾಧಕ ಕರ್ಮಬಾಹಿರನಾಗಬೇಕಾಗಿಲ್ಲ. ತನ್ನ ಪಾಲಿಗೆ ಬಂದ ಕರ್ತವ್ಯಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುವುದು ಶ್ರೇಯಸ್ಕರ. ಸಮರ್ಪಣದಿಂದ ಸಾಧಕನ ಸಾತ್ತ್ವಿಕ ಗುಣ ಜ್ಯೋತಿಯಾಗುತ್ತದೆ. ರಜೋಗುಣ ತಪಶ್ಶಕ್ತಿಯಾಗುತ್ತದೆ. ತಮೋಗುಣ ಶಾಂತಿಯಾಗಿ ಪರಿವರ್ತಿತವಾಗುತ್ತದೆ. ಸಮರ್ಪಣಕ್ಕೆ ಅಡ್ಡಿಯಾಗುವುವು ಅಹಂಕಾರ ಮತ್ತು ತೃಷ್ಣೆ. ಸಮರ್ಪಣ ಪೂರ್ಣವಾಗಲು ಬಹುಕಾಲಬೇಕು. ಪ್ರಕೃತಿಗೇ ಬಿಟ್ಟರೆ ಈ ಪೂರ್ಣ ಸಮರ್ಪಣ ಸಿದ್ಧಿಯಾಗಲು ಹಲವು ಜೀವಮಾನಗಳು ಬೇಕಾಗಬಹುದು. ಅಂತಹ

ಸಾಧನೆಯ ಸಿದ್ಧಿಯನ್ನು ಒಂದೇ ಜೀವನದಲ್ಲಿ ಪಡೆಯಲು ಸಾಧಕನಿಗೆ ತಾಳ್ಮೆ ಬೇಕು, ಅಭೀಪ್ಸೆ ಬೇಕು, ತಾನು ಕೈಗೊಂಡ ಯೋಗದಲ್ಲಿ ಅವಿಚಲ ವಿಶ್ವಾಸ ಬೇಕು, ಋಜು ಹೃದಯವಿರಬೇಕು.

ಈ ಯೋಗ ಸಾಧನೆಯನ್ನು ಯಾವ ವಯಸ್ಸಿನಲ್ಲಾದರೂ ಆರಂಭಿಸಬಹುದು. ಪ್ರಪಂಚದಲ್ಲಿ ವ್ಯಕ್ತಿ ವ್ಯಕ್ತಿಗೂ ಸ್ವಾಭಾವಿಕವಾದ ವ್ಯತ್ಯಾಸಗಳಿವೆ. ಕೆಲವರಿಗೆ ಕರ್ಮ ಪ್ರಿಯವಾಗಬಹುದು, ಮತ್ತೆ ಕೆಲವರಿಗೆ ಧ್ಯಾನ ಪ್ರಿಯವಾಗಬಹುದು, ಇನ್ನು ಕೆಲವರಿಗೆ ಜ್ಞಾನ ಪ್ರಿಯವಾಗಬಹುದು, ಮತ್ತಿತರಿಗೆ ಭಕ್ತಿ ಪ್ರಿಯವಾಗಬಹುದು. ಶ್ರೀ ಅರವಿಂದರು ಭಿನ್ನ ಭಿನ್ನ ಪ್ರವೃತ್ತಿಯ ಯಾರಾದರೂ ಈ ಯೋಗವನ್ನು ಅವಲಂಬಿಸಬಹುದೆಂದು ಹೇಳಿದ್ದಾರೆ. ಈ ಯೋಗ ಸಾಧನೆಗೆ ಮನೆಮಠಗಳನ್ನು ಬಿಡಬೇಕಾಗಿಲ್ಲ, ಕೈಗೊಂಡ ಕಾರ್ಯಗಳನ್ನು ಬಿಡಬೇಕಾಗಿಲ್ಲ, ಸಂಸಾರವನ್ನು ಬಿಡಬೇಕಾಗಿಲ್ಲ, ಬಡವರಾಗಲಿ, ಶ್ರೀಮಂತರಾಗಲಿ, ಪುರುಷರಾಗಲಿ, ಸ್ತ್ರೀಯರಾಗಲಿ, ಯಾವ ಜನಾಂಗದವರಾಗಲಿ ಈ ಯೋಗ ಪಥದಲ್ಲಿ ಸಾಧಕರಾಗಬಹುದು.

ಈ ಯೋಗ ಸಾಧನೆಯಲ್ಲಿ ಪ್ರಥಮತಃ ಮನಸ್ಸು ನಿಶ್ಚಲವಾಗಬೇಕು. ಚೇತನವನ್ನು ಆಧ್ಯಾತ್ಮಿಕ ಪ್ರಜ್ಞೆಯಲ್ಲಿ ಅರಳಿಸಬೇಕು. ಮನಸ್ಸನ್ನು ಒಮ್ಮೆಯೇ ನಿಶ್ಚಲಗೊಳಿಸುವುದು ಸಾಧ್ಯವಿಲ್ಲ. ಮೊದಲು ಮನಸ್ಸಿನಲ್ಲಿ ಹರಿದು ಹೋಗುವ ನಾನಾ ಭಾವಗಳನ್ನು ಸಾಕ್ಷಿಯಾಗಿ ನೋಡಲು ಕಲಿಯಬೇಕು. ಅಚಂಚಲತೆ, ಸ್ಥಿರತೆ ಇವೆಲ್ಲ ಮನಸ್ಸನ್ನು ಭಗವದಭಿಮುಖವಾಗಿ ಹರಿಸುವ ದಿವ್ಯ ಶಕ್ತಿಗಳು. ಮನಸ್ಸಿನಲ್ಲಿ ಅನೇಕ ಸ್ತರಗಳಿವೆ. ಅವುಗಳನ್ನು ಗುರುತಿಸಿ, ಪರಿವರ್ತಿಸುವುದು ಕಷ್ಟದ ಕೆಲಸವಾದರೂ ಸತತ ಸಾಧನೆಯಿಂದ ಸಾಧ್ಯ.

ಮಾನವ ಹುಟ್ಟಿದಂದಿನಿಂದ ಯಾವುದಾದರೊಂದು ಕರ್ಮದಲ್ಲಿ ಪ್ರವೃತ್ತನಾಗುತ್ತಾನೆ. ಅಹಂಕಾರ ಮೂಲವಾದ ಕರ್ಮ, ಬಂಧನಗಳ ಪರಂಪರೆಯನ್ನೇ ನಿರ್ಮಿಸುತ್ತದೆ. ಪೂರ್ಣಯೋಗದ ಸಾಧಕ ಎಲ್ಲವನ್ನೂ ಭಗವತ್ ಪ್ರೀತ್ಯರ್ಥವಾಗಿ ಮಾಡಬೇಕು. ಕರ್ತವ್ಯ ಕರ್ಮದಿಂದ ಸಾಧಕ ಎಂದೂ ಪಲಾಯನ ಮಾಡಬಾರದು. ಭಗವದರ್ಪಿತವಾದ ಕರ್ಮ ಪವಿತ್ರವಾಗುತ್ತದೆ. ಯಾವ ಕರ್ಮವಾಗಲಿ ತನಗೆ ತಾನೇ ಯಾವುದೂ ಹೆಚ್ಚಲ್ಲ, ಕೀಳಲ್ಲ. ಕರ್ಮವನ್ನು ಶ್ರೇಷ್ಠ ರೀತಿಯಲ್ಲಿ ಮಾಡಿದರೆ ಅದೇ ಮಹತ್ವಪೂರ್ಣ. ಭಗವದರ್ಪಿತವಾದ ಕರ್ಮದಿಂದಲೇ ಮನಸ್ಸಿಗೆ ಶಾಂತಿ, ನೆಮ್ಮದಿ. ಸಾಧಕ ಮುಂದುವರಿದಂತೆ ಆತನ ಪ್ರಜ್ಞೆಯ ಹೊರವಲಯದಿಂದಲೇ ಎಲ್ಲ ಕರ್ಮಗಳನ್ನು ಸಮರ್ಪಕವಾಗಿ ನಿರ್ವಹಿಸುವ ಶಕ್ತಿ ಲಭಿಸುತ್ತದೆ : ಪ್ರಿಯ ಅಪ್ರಿಯವೆಂಬ ಭಾವನೆ ಮಾಯವಾಗಿ ಸತ್ಕರ್ಮದಲ್ಲಿ ಮನಸ್ಸು ನೆಲಸುತ್ತದೆ. ದೇಹ, ಪ್ರಾಣ, ಮನಸ್ಸು, ಬುದ್ಧಿ ಅಹಂಕಾರ–ಎಲ್ಲವೂ ಭಗವದರ್ಪಿತವಾದರೆ ಸಮರ್ಪಣ ಪೂರ್ಣವಾಗುತ್ತದೆ. ತೃಷ್ಣೆ, ಕಾಮ, ಸ್ವಾರ್ಥ, ಅಹಂಕಾರ, ದರ್ಪ, ಅಸೂಯೆ ಮೊದಲಾದ ಸತ್ಯ ವಿರುದ್ಧವಾದ ಶಕ್ತಿಗಳ ವಿಸರ್ಜನೆ, ಅವುಗಳ ಪರಿವರ್ತನೆ-ಇವೇ ಪ್ರಾಣದ ಸಮರ್ಪಣ. ಸಕಲ ಕರ್ಮಗಳೂ ಭಗವದರ್ಪಿತವಾಗಲೆಂದು ಮಾಡುವ ಕಾಯಕ, ದೇಹ ಸಮರ್ಪಣ.

ಸಾಧಕನು ತನ್ನ ಅಂತರಾತ್ಮನ ಆದೇಶಕ್ಕನುಗುಣವಾಗಿ ಕರ್ಮ ತತ್ಪರನಾಗಲು, ಮಾತೆಯ ಕೃಪೆ ಬೇಕು. ಸಾಧಕನನ್ನು ಭಗವಂತನತ್ತ ಕರೆದೊಯ್ಯುವ ಶಕ್ತಿಯನ್ನೇ ಪ್ರತಿಮಾ ರೂಪವಾಗಿ ಜಗನ್ಮಾತೆ ಎಂದು ಕರೆಯುವುದು. ಈ ಶಕ್ತಿಯನ್ನು ವೈದಿಕ ಋಷಿಗಳು ಆದ್ಯಾಶಕ್ತಿ ಎಂದು ಸಾಂಕೇತಿಕವಾಗಿ ನುಡಿದಿದ್ದಾರೆ.

ಶ್ರೀ ಅರವಿಂದರೂ ಮಾತೃ ಶಕ್ತಿಯಿಂದಲೇ ಬೆಳಕಿನ ಉದಯ, ದಿವ್ಯ ಜೀವನದ ಆವಿರ್ಭಾವ ಎಂದಿದ್ದಾರೆ. ಪರಬ್ರಹ್ಮದಲ್ಲಿ ಚಿತ್ ಅಥವಾ ಪರಾಸಂವಿತ್ (Transcendental Consciousness) ಆಗಿದ್ದಾಳೆ, ಈ ಮಾತೆ. ವಿಶ್ವವೆಲ್ಲ ಆಕೆಯ ಸೃಷ್ಟಿ. ಆಕೆಯ ಕೃಪೆ ಇಲ್ಲದೆ ಯಾರೂ ಈ ಜಗನ್ನಾಟಕದಿಂದ ಮುಕ್ತರಾಗುವಂತಿಲ್ಲ. ಅವಳೇ ಈ ಸೃಷ್ಟಿಯ ಮಾಹೇಶ್ವರಿ, ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ. ಭಗವಂತನ ಲೀಲಾ ಶಕ್ತಿಯೇ ಈ ಮಾತೆ. ಆಕೆಯ ಕೃಪೆಯನ್ನು ಪಡೆಯಲು ಶ್ರದ್ಧೆ, ನಿಷ್ಠೆ, ಸಮರ್ಪಣಗಳು ಚಿರಜಾಗ್ರತವಾಗಿರಬೇಕು. ಮಾತೆಯ ಅನುಗ್ರಹವೆಂದರೆ ಭಗವಂತನ ವರಪ್ರಸಾದ.

ಮಾಹೇಶ್ವರಿ ಜ್ಞಾನಶಕ್ತಿಯ ಅಧಿದೇವತೆ. ಜ್ಞಾನಸ್ವರೂಪಿಣಿಯಾದ ಆಕೆ ಅಚಂಚಲಳು, ಅದ್ಭುತಳು, ಮಹಿಮಾನ್ವಿತಳು, ಪ್ರಶಾಂತಳು, ಜೀವರಾಶಿಗಳ ಸ್ವಭಾವಗಳನ್ನೂ ಸೃಷ್ಟಿ ನಿಯಮಗಳನ್ನೂ ಆಕೆ ಬಲ್ಲಳು. ಅವಳು ಸಹನ ಶೀಲೆ, ಸಮದರ್ಶಿನಿ. ಅವರವರ ಕರ್ಮಕ್ಕನುಗುಣವಾಗಿ ಸಾಧಕರನ್ನು ಕರೆದೊಯ್ಯುವ ಆಕೆ ಕರುಣಾಮೂರ್ತಿ. ಜಗತ್ತನ್ನು ದಿವ್ಯ ಸತ್ಯದತ್ತ ಪರಿವರ್ತಿಸುವ ಮಹಾಕಾರ್ಯದಲ್ಲಿ ಅವಳು ಪ್ರವೃತ್ತಳಾಗಿದ್ದಾಳೆ. ಮಹಾಕಾಳಿ ಬಲ ಮತ್ತು ಶಕ್ತಿಗಳ ಅಧಿದೇವತೆ. ಅಸುರ ಶಕ್ತಿಗೆ ಅವಳು ಭಯಂಕರಳು. ದ್ರೋಹ, ಮಿಥ್ಯಾಚಾರಗಳನ್ನು ಕಂಡು ಕೆರಳಿ ರುದ್ರರೂಪ ತಾಳುತ್ತಾಳೆ. ರೂಪದಲ್ಲಿ ಭಯಂಕರಿಯಾದರೂ ಸ್ನೇಹಮಯಿ, ಪ್ರಾಮಾಣಿಕ ಸಾಧಕರಿಗೆ ಅತಿ ಪ್ರಿಯಳು. ಆಕೆ ಜಾಗ್ರತವಾಗಿರದಿದ್ದರೆ ಜಗತ್ತೆಲ್ಲ ಆಸುರೀ ಶಕ್ತಿಯಿಂದ ತುಂಬಿ ಹೋಗುತ್ತಿತ್ತು.

ಜ್ಞಾನದ ಪ್ರತಿನಿಧಿ ಮಾಹೇಶ್ವರಿ, ಶಕ್ತಿಯ ಪ್ರತಿನಿಧಿ

ಸಿಯುತ್ತಾಳೆ, ಸಂಪತ್ತಿನ, ಸೌಂದರ್ಯದ, ಪ್ರೇಮದ ಪ್ರತಿನಿಧಿ ಮಹಾಲಕ್ಷ್ಮಿ. ಭಗವಂತನ ಸೌಂದರ್ಯ ಮಾಧುರ್ಯಗಳನ್ನು ಪ್ರಸಾರ ಮಾಡುತ್ತಾಳೆ ಇವಳು. ಆಕೆ ಪದಾರ್ಪಣ ಮಾಡಿದೆಡೆ ಯಲ್ಲಿ ಆನಂದದ ಸೆಲೆಗಳು ಚಿಮ್ಮುತ್ತವೆ. ದಾರಿದ್ರ್ಯ, ಕಶ್ಮಲ, ವಿಕಾರಗಳನ್ನು ಅವಳು ಸಹಿಸುವುದಿಲ್ಲ. ಸ್ವಾರ್ಥ, ದ್ವೇಷ, ಮಾತ್ಸರ್ಯ, ಹಿಂಸಾಭಾವ, ಅಸೂಯೆ, ಕಲಹವೃತ್ತಿ–ಇವು ಗಳನ್ನು ಅವಳು ಸಹಿಸಳು. ಜಗತ್ತನ್ನು ಆನಂದದತ್ತ ಕರೆ ದೊಯ್ಯುವ ಆನಂದದಾಯಿನಿ ಅವಳು. ಮಹಾಸರಸ್ವತಿ ಎಲ್ಲ ವನ್ನೂ ಸಾಮರಸ್ಯಗೊಳಿಸುವ ತಾರಕಶಕ್ತಿ. ಪ್ರತಿಯೊಂದನ್ನೂ ನೇರ್ಪಡಿಸುವ ವಿಚಕ್ಷಣೆ ಇವಳದು. ನಿರಂತರ ಕಾರ್ಯತತ್ಪರಳಾದ ಈಕೆಯ ದೃಷ್ಟಿಯಲ್ಲಿ ಯಾವುದೂ ಅಲ್ಪವಲ್ಲ. ಅಜಾಗರೂಕತೆ, ಉಪೇಕ್ಷೆ, ಸೋಮಾರಿತನಗಳನ್ನು ಇವಳು ಸಹಿಸುವುದಿಲ್ಲ. ನ್ಯೂನತೆ ಎಂಬುದು ಅವಳಿಗೆ ತಿಳಿಯದು. ಸೃಷ್ಟಿಯ ಸರ್ವಾಂಗ ಪರಿಪೂರ್ಣತೆಗಾಗಿ ಸದಾ ಕಾರ್ಯತತ್ಪರಳವಳು. ಮಾನವ ನೊಡನೆ ವಿಶ್ವದ ಪರಿಪೂರ್ಣತೆಗಾಗಿ ಸಹನೆಯಿಂದ ದುಡಿಯು ತ್ತಿರುವ ಮಹಾಸರಸ್ವತಿ, ಸ್ಮಿತವದನೆ ಹಾಗೂ ಶುಭಂಕರಿ. ಅವಳು ನಿರಂತರವೂ ಪರಂಜ್ಯೋತಿಯತ್ತ ಜಗತ್ತನ್ನು ಕರೆ ದೊಯ್ಯುತ್ತಾಳೆ, ಭೌತಿಕ ಆಧಾರವನ್ನು ಸುಭದ್ರಗೊಳಿಸುತ್ತಾಳೆ. ಮಾಹೇಶ್ವರಿ ಮಹಾಕಾಳಿ ಮಹಾಲಕ್ಷ್ಮಿ ಮಹಾಸರಸ್ವತಿ ಸ್ವರೂಪದ ಪರಾಮಾತೆಯ ಕೃಪೆಯಿಂದಲೆ ಅಜ್ಞಾನ, ಅಸತ್ಯ ಮತ್ತು ಕ್ಲೇಶಗಳನ್ನು ದಾಟಿ, ಜ್ಞಾನ, ಸತ್ಯ ಮತ್ತು ಅಮರ ಆನಂದಗಳನ್ನು ಪಡೆಯುವುದು.

ಪರಾಮಾತೆಯ ಕೃಪೆಯನ್ನು ಪಡೆದ ಸಾಧಕ ದೈವೀಭಕ್ತಿಯ ಕೇಂದ್ರವಾಗುತ್ತಾನೆ. ಅವನಿಗೆ ಮಹಾಯೋಗ ಸುಲಭವೂ

ಸ್ಥಾದುವೂ ಆಗುತ್ತದೆ. ಈ ಯೋಗದಲ್ಲಿ ಧ್ಯಾನ ತ್ಯಾಜ್ಯವಲ್ಲ. ಧ್ಯಾನದಿಂದ ಮನಸ್ಸಿನಲ್ಲಿ ಹರಿದುಹೋಗುವ ಅಸಂಖ್ಯಾತ ಚಿಂತನಗಳನ್ನು ಸಾಕ್ಷಿಯಾಗಿ ಕಾಣುವ ಶಕ್ತಿ ಲಭಿಸಬೇಕು. ಮನಸ್ಸು ದೃಢ ಪ್ರತಿಷ್ಠಿತ ಶಾಂತಿಯಲ್ಲಿ ನೆಲಸಿದರೆ, ದುಷ್ಟ ಆಲೋಚನೆಗಳು ಒಮ್ಮೆ ಮನಸ್ಸಿಗೆ ಪ್ರವೇಶಿಸಿದರೂ ಅಲ್ಲಿ ತಮಗೆ ಪುರಸ್ಕಾರವಿಲ್ಲವೆಂದು ಹೊರಟುಹೋಗುತ್ತವೆ. ಸಾಧಕನು ಕರ್ಮ ಜ್ಞಾನ ಭಕ್ತಿಗಳನ್ನು ಸಮನ್ವಯಮಾಡಬೇಕು. ಆಗ ಅವನ ಸಮಸ್ತ ಜೀವನ ಭಗವಂತನ ಕರ್ಮಕ್ಷೇತ್ರದ ಪ್ರಣಾಳಿಕೆಯಾಗುತ್ತದೆ.

ಪೂರ್ಣಯೋಗಿಗೆ ಮಾಹೇಶ್ವರಿ ಜ್ಯೋತಿರ್ಮಯ ಬುದ್ಧಿಯನ್ನು ನೀಡುತ್ತಾಳೆ, ಮಹಾಕಾಳಿ ಮಹಾಶಕ್ತಿಯನ್ನು ನೀಡುತ್ತಾಳೆ, ಮಹಾಲಕ್ಷ್ಮಿ ಪ್ರಸನ್ನವಾದ ಮನಸ್ಸನ್ನು ನೀಡುತ್ತಾಳೆ, ಮಹಾಸರಸ್ವತಿ ದಿವ್ಯ ಅಭೀಪ್ಸೆಯನ್ನೂ ಸಮನ್ವಯ ದೃಷ್ಟಿಯನ್ನೂ ನೀಡುತ್ತಾಳೆ. ಇಂತಹ ಪೂರ್ಣಯೋಗಿಯದು ಮುಕ್ತ ಜೀವನ. ದೇಹದಲ್ಲಿ ಮಹತ್ವ, ಬಲ, ಧಾರಣಾ ಸಾಮರ್ಥ್ಯಗಳೂ ಪ್ರಾಣದಲ್ಲಿ ಪೂರ್ಣತೆ, ಪ್ರಸನ್ನತೆ, ಸಮತೆ, ಭೋಗ ಸಾಮರ್ಥ್ಯಗಳೂ ಹೃದಯದಲ್ಲಿ ಸಾಮ್ಯತ್ವ, ತೇಜಸ್ಸುಗಳೂ ಅವನಲ್ಲಿ ನೆಲಸುತ್ತವೆ. ತ್ರಿಕಾಲ ಜ್ಞಾನವೆಂಬುದು ಇಂತಹ ದಿವ್ಯಮಾನವನಿಗೆ ಪ್ರತ್ಯಕ್ಷ. ಇಂತಹ ದಿವ್ಯ ಮಾನವ ಕುಲದ ಆವಿರ್ಭಾವವನ್ನೇ ಶ್ರೀ ಅರವಿಂದರು ಹಾರೈಸುವುದು.

## ೫. ಶಿಕ್ಷಣ ವಿಚಾರಗಳು

ಶ್ರೀಅರವಿಂದರು ಶಿಕ್ಷಣವನ್ನು ಕುರಿತು ತಿಳಿಸಿದ ವಿಚಾರಧಾರೆ ಅಮೂಲ್ಯವಾಗಿದೆ. ಇಂದು ಜಗತ್ತಿನಲ್ಲಿ ಮಾನವಕುಲ ಯಾವುದೋ ಅತೃಪ್ತಿಯ ಜಂಜಾಟದಲ್ಲಿ ಸಿಕ್ಕಿ ಜರ್ಝರಿತ

ವಾಗಿದೆ. ಸ್ವಾರ್ಥಮೂಲವಾದ ಸ್ಪರ್ಧೆಯಲ್ಲಿ ತೊಳಲಾಡುತ್ತ ಬಳಲಿದ ಜನರು ಅತೃಪ್ತರಾಗಿ ದ್ವೇಷಾಸೂಯೆಗಳಿಗೆ ಸಿಕ್ಕಿ ತತ್ತರಿಸುತ್ತಿದ್ದಾರೆ. ಇಂದಿನ ಈ ಜಾಡ್ಯಕ್ಕೆ ಮುಖ್ಯ ಕಾರಣ ಸಮನ್ವಯ ದೃಷ್ಟಿಯ ಅಭಾವ ಹಾಗೂ ಆದರ್ಶವಿಲ್ಲದ ಜೀವನ. ಆದರ್ಶವಿಲ್ಲದ ಜೀವನ ಸಂಕಟಕರ. ಶಿಕ್ಷಣದಿಂದ ಆದರ್ಶಜೀವನ ರೂಪಿತವಾಗಬೇಕು.

ಬಾಲಕರ ಹಾಗೂ ತರುಣರ ವಿದ್ಯಾಭ್ಯಾಸದಲ್ಲಿ ಕೇವಲ ಬುದ್ಧಿಯ ಬೆಳವಣಿಗೆಗೆ ಪ್ರಮುಖ ಪಾತ್ರವಿದ್ದರೆ ಸಾಲದು. ಭಾವಗಳ ಸಂಸ್ಕಾರ ಹಾಗೂ ಶೀಲ ನಿರ್ಮಾಣಕ್ಕೆ ವಿಶೇಷ ಸ್ಥಾನವಿರಬೇಕು. ಜೀವಂತ ಮಾನವ ಮನಸ್ಸನ್ನು ರೂಪಿಸುವಾಗ ಅಧ್ಯಾಪಕರು ಬಹು ಎಚ್ಚರವಾಗಿರಬೇಕು. ಇಂದಿನ ವಿದ್ಯಾಭ್ಯಾಸ ಹಲವು ರೀತಿಯಲ್ಲಿ ಪ್ರಗತಿ ಹೊಂದಿದ್ದರೂ ಹಲವು ದೋಷಗಳಿಂದ ಕೂಡಿದೆ. ಸಹಜ, ಸುಲಭ, ಪರಿಣಾಮಕಾರಿ ಬೋಧನ ಕ್ರಮವನ್ನು ಭಾರತದಲ್ಲಿ ರೂಢಿಸಬೇಕಾಗಿದೆ. ಅಧ್ಯಾಪಕ ತಾನು ಕೇವಲ ಸಹಾಯಕ, ಮಾರ್ಗದರ್ಶಕ ಹಾಗೂ ಮತ್ತಷ್ಟು ಕಲಿಯುವ ಶಿಷ್ಯನೆಂಬ ಭಾವನೆಗಳಿಂದ ಕೂಡಿರಬೇಕು. ಶಿಷ್ಯನ ಕಲಿಕೆಗೆ ಎಲ್ಲ ನೆರವನ್ನೂ ನೀಡಬೇಕು ಗುರು. ಜ್ಞಾನವನ್ನು ಮಾತ್ರೆಯಂತೆ ನುಂಗಿಸಲು ತೊಡಗಬಾರದು ಅಧ್ಯಾಪಕ. ಅವರ ಮುಖ್ಯ ಕೆಲಸ ಶಿಷ್ಯ ಪ್ರಬುದ್ಧನಾಗಲು ಸಕಲ ಪ್ರೋತ್ಸಾಹವನ್ನೂ ನೀಡುವುದು.

ಅನೇಕರು ತಮ್ಮ ಅಭಿರುಚಿಗೆ ತಕ್ಕಂತೆ ಮಕ್ಕಳ ವಿದ್ಯಾಭ್ಯಾಸ ಮಾಡಬೇಕೆಂಬ ಹುರುಡಿನಲ್ಲಿದ್ದಾರೆ. ಇದು ಅನಾಗರಿಕ ಮಾರ್ಗ. ತಮ್ಮ ಸ್ವಭಾವಕ್ಕನುಗುಣವಾದ ವಿದ್ಯಾರ್ಜನೆ ಮಾಡಲು ಮಕ್ಕಳಿಗೆ ಪ್ರೋತ್ಸಾಹವಿರಬೇಕು. ಇದಕ್ಕೆ ವಿರುದ್ಧವಾಗಿ ವರ್ತಿ

ಸಿದರೆ, ವಿದ್ಯಾರ್ಥಿಯ ಜೀವನಕ್ಕೂ ಸಮಾಜಕ್ಕೂ ದ್ರೋಹವೆಸಗಿದಂತಾಗುತ್ತದೆ. ಯಾವ ವೃತ್ತಿಯಿಂದ ಹೆಚ್ಚು ಹಣ ಸಂಪಾದನೆಯಾಗುವುದೋ ಅಂತಹ ವಿದ್ಯಾರ್ಜನೆಗಾಗಿ ಇಷ್ಟವಿರಲಿ ಇಲ್ಲದಿರಲಿ ನುಗ್ಗುವ ಹವ್ಯಾಸ ಇಂದು ಹೆಚ್ಚಾಗಿದೆ. ಇಂತಹ ನೂಕುನುಗ್ಗಲಿನಿಂದ ದೇಶಕ್ಕೂ ಮಾನವ ಕಲ್ಯಾಣಕ್ಕೂ ಆಗುವ ಅನಾಹುತ ಅವರ್ಣನೀಯ. ಪ್ರತಿಯೊಬ್ಬ ಬಾಲಕನ ಆತ್ಮ ವಿಕಾಸಕ್ಕೆ ಯೋಗ್ಯವಾದ ವಿದ್ಯೆಯನ್ನೊದಗಿಸುವುದೇ ಮುಖ್ಯ ಕರ್ತವ್ಯ. ಪ್ರತಿಯೊಂದು ದೇಶಕ್ಕೂ ಒಂದು ಪ್ರಾಚೀನ ಸಂಸ್ಕೃತಿಯ ಹಿನ್ನೆಲೆ ಇದೆ. ಆ ಹಿನ್ನೆಲೆಯ ಉತ್ತಮಾಂಶಗಳನ್ನು ರೂಢಿಸಲು ವಿದ್ಯಾಭ್ಯಾಸಕ್ರಮದಲ್ಲಿ ಅವಕಾಶವಿರಬೇಕು.

ವಿದ್ಯಾರ್ಥಿಯ ಚಿತ್ತ, ಮನಸ್ಸು, ಬುದ್ಧಿ, ಪ್ರತಿಭಾಶಕ್ತಿಯ ವಿಕಾಸದೊಡನೆ ಅವನ ನೈತಿಕಶಕ್ತಿಯ ಬೆಳವಣಿಗೆಗೂ ಅವಕಾಶವಿರಬೇಕು. ಶಾಲಾ ಕಾಲೇಜುಗಳಲ್ಲಿ ಇಂತಹ ಶಿಕ್ಷಣಕ್ಕೆ ಪ್ರೋತ್ಸಾಹ ಕಡಿಮೆಯಾಗಿದೆ. ಕೇವಲ ನಿಯಮಗಳಿಂದಾಗಲಿ ನೈತಿಕ ಪುಸ್ತಕಗಳನ್ನು ಓದಿಸುವುದರಿಂದಾಗಲಿ ವಿದ್ಯಾರ್ಥಿಗಳಿಗೆ ನೈತಿಕ ಜೀವನದಲ್ಲಿ ಶ್ರದ್ಧೆ ಮೂಡುವುದಿಲ್ಲ. ಅದಕ್ಕೆ ಮುಖ್ಯವಾದುದು ಅಧ್ಯಾಪಕರ ವರ್ಚಸ್ಸು ಮತ್ತು ಅವರ ಶೀಲ. ನೈತಿಕ ಮತ್ತು ಧಾರ್ಮಿಕ ಭಾವನೆಗಳು ಗುರುವಿನ ಜೀವಂತ ನಿದರ್ಶನದಿಂದ ಶಿಷ್ಯರ ಹೃದಯಗಳನ್ನು ಪ್ರವೇಶಿಸುತ್ತವೆ.

ಪ್ರಾಚೀನ ಗುರುಕುಲಗಳಲ್ಲಿ ಗುರುವಿನ ವಿದ್ಯೆ ಮತ್ತು ಶೀಲಗಳನ್ನು ಕಂಡು ಶಿಷ್ಯರಿಗೆ ಗುರುಭಕ್ತಿ ಸಹಜವಾಗಿ ಮೂಡುತ್ತಿತ್ತು. ಈ ಮಾರ್ಗವೆ ಅತ್ಯಂತ ಶ್ರೇಯಸ್ಕರ. ಇಂದು ಗುರುಕುಲಗಳು ಪುನಃ ಪ್ರತಿಷ್ಠಿತವಾಗುವುದು ಅಸಾಧ್ಯ. ಆದರೆ ಆ ಪದ್ಧತಿಯ ಉತ್ತಮಾಂಶಗಳನ್ನು ಅನುಷ್ಠಾನಕ್ಕೆ ತರಲು ಯಾವ ಅಡ್ಡಿಯೂ

ಇಲ್ಲ. ಮಹಾಪುರುಷರ ಜೀವನ ಹಾಗೂ ಅವರ ಜೀವನ ದರ್ಶನಗಳನ್ನು ವಿದ್ಯಾರ್ಥಿಗಳು ಮನನಮಾಡಬೇಕು. ಶ್ರೇಷ್ಠ ಕೃತಿಗಳ ಸಂಗ ನಿಜವಾಗಿ ಸತ್ಸಂಗ. ವಿದ್ಯಾಭ್ಯಾಸದಿಂದ ಜ್ಞಾನಾರ್ಜನೆಯಲ್ಲಿ ಶ್ರದ್ಧೆ ಉದ್ದೀಪನವಾಗಿ ಅಂತಃಕರಣ ನಿರ್ಮಲವಾಗಬೇಕು; ಧೈರ್ಯ, ದೇಶಭಕ್ತಿ, ಪರೋಪಕಾರ ಮೊದಲಾದ ಭಾವಗಳು ಪ್ರಬುದ್ಧವಾಗಬೇಕು. ವಿದ್ಯಾರ್ಥಿಗಳಲ್ಲಿ ದುಷ್ಟಸಂಸ್ಕಾರಗಳು ಗೋಚರವಾದಾಗ ಅಧ್ಯಾಪಕರು ಕ್ರೂರವಾಗಿ ದಂಡಿಸದೆ ಅವುಗಳಿಂದ ಪಾರಾಗುವ ಮಾರ್ಗದರ್ಶನ ಮಾಡಬೇಕು. ಹೀನ ಸಂಸ್ಕಾರಗಳನ್ನು ರೋಗಗಳೆಂದು ಭಾವಿಸಿ ಚಿಕಿತ್ಸೆ ನೀಡಬೇಕು.

ಅಧ್ಯಾಪಕನು ಗುರುತರವಾದ ತನ್ನ ಕರ್ತವ್ಯದಲ್ಲಿ ನಿಷ್ಠೆಯನ್ನಿಟ್ಟರೆ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಧಾರ್ಮಿಕ ಭಾವನೆಗಳ ಬೀಜಗಳನ್ನು ಬಿತ್ತುವುದು ಕಷ್ಟವಲ್ಲ. ಜೀವನದಲ್ಲಿ ಧಾರ್ಮಿಕ ಭಾವನೆಗಳನ್ನು ಅನುಷ್ಠಾನಕ್ಕೆ ತರಲು ಯತ್ನಿಸಬೇಕು. ವಿದ್ಯಾಭ್ಯಾಸದಲ್ಲಿ ಹಲವಾರು ವಿಷಯಗಳನ್ನು ಬಾಲಕರ ಮನಸ್ಸಿಗೆ ತುಂಬುವ ವಿಶೇಷ ಪ್ರಯತ್ನ ನಡೆಯುತ್ತಿದೆ. ಪ್ರಾಚೀನ ಕಾಲದಲ್ಲಿ ಒಂದು ಅಥವಾ ಎರಡು ವಿಷಯಗಳಲ್ಲಿ ವಿಶೇಷ ಶಿಕ್ಷಣ ನೀಡಿ ಅನಂತರ ಮತ್ತೊಂದು ವಿಷಯಕ್ಕೆ ಪ್ರವೇಶಿಸುವ ಪದ್ಧತಿ ಇತ್ತು. ಇಂದು ಅಂತಹ ಪದ್ಧತಿ ಸ್ನಾತಕೋತ್ತರ ವಿಭಾಗದಲ್ಲಿ ಸ್ವಲ್ಪ ಮಟ್ಟಿಗೆ ದೊರಕುವಂತಾಗಿದೆ. ಆದರೆ ಚಿಕ್ಕಂದಿನಿಂದಲೂ ಅಂತಹ ಏಕಾಗ್ರತೆಗೆ ಅವಕಾಶ ದೊರಕುವುದರಿಂದ ಹೆಚ್ಚಿನ ಪ್ರಯೋಜನ.

ವಿದ್ಯಾರ್ಜನೆಗೆ ಮಾತೃಭಾಷೆಯೇ ಅತ್ಯುತ್ತಮ ಮಾಧ್ಯಮ. ಮಾತೃಭಾಷೆಯಲ್ಲಿರುವ ಗ್ರಂಥಸಂಪತ್ತಿಯನ್ನು ಪ್ರತಿಯೊಬ್ಬ ವಿದ್ಯಾರ್ಥಿಯೂ ತಿಳಿದಿರಬೇಕು. ಚಿಕ್ಕ ವಯಸ್ಸಿನಲ್ಲಿ ಮಕ್ಕಳ ಮನಸ್ಸು ತೀಕ್ಷ್ಣ ಮತ್ತು ಜಾಗ್ರತ. ಆಗ ಜೀವನೋಪಯುಕ್ತ

ವಾದ ಜ್ಞಾನ ಮತ್ತು ಕಾರ್ಯಗಳಲ್ಲಿ ಅವರನ್ನು ನಿಯೋಜಿಸುವುದು ಪ್ರಜ್ಞರಾದ ಅಧ್ಯಾಪಕರಿಗೆ ಸುಲಭ.

ಬಾಲಕರಿಗೆ ಪ್ರಾರಂಭದಲ್ಲಿ ಇಂದ್ರಿಯಪಟುತ್ವವನ್ನು ಬೆಳಸಿ ಅವರ ಶಕ್ತಿ ಭಗವನ್ಮುಖವಾಗುವಂತೆ ಮಾಡಬೇಕು. ಅವರು ಜಗತ್ತನ್ನು ಉತ್ತಮ ರೀತಿಯಲ್ಲಿ ವೀಕ್ಷಿಸುವಂತೆ ಮಾಡಬೇಕು. ಇಂದ್ರಿಯಶಕ್ತಿ ಶುದ್ಧವಾಗುವುದನ್ನು 'ನಾಡೀಶುದ್ಧಿ' ಎಂದು ಕರೆಯುತ್ತಾರೆ. ಯೋಗಮಾರ್ಗದಲ್ಲಿ, ನರಗಳ ಶುದ್ಧಿಯಾದರೆ ಮನಸ್ಸೂ ಬುದ್ಧಿಯೂ ಶುದ್ಧವಾಗುತ್ತದೆ ಎಂದು ಹೇಳಿದೆ. ಪ್ರಪಂಚದ ಅನುಭವಗಳೆಲ್ಲ ಚಿತ್ತದಲ್ಲಿ ಕಾಣಿಸಿಕೊಂಡು ಮನಸ್ಸಿನ ಮೂಲಕ ಬುದ್ಧಿಗೆ ಮುಟ್ಟುತ್ತವೆ. ಮನಸ್ಸು, ಇಂದ್ರಿಯವೂ ಹೌದು, ವಾಹಕವೂ ಹೌದು. ಚಿತ್ತ ಮತ್ತು ಮನಸ್ಸುಗಳು ಶುದ್ಧವಾದರೆ ಸೂಕ್ಷ್ಮದೃಷ್ಟಿ ಲಭಿಸುತ್ತದೆ. ಮನಸ್ಸಿಗಿರುವ ಅದ್ಭುತ ಶಕ್ತಿಯ ಪರಿಚಯವೆಲ್ಲ ಇನ್ನೂ ಮಾನವ ಕುಲಕ್ಕೆ ಲಭಿಸಿಲ್ಲ.

ವಿದ್ಯಾಭ್ಯಾಸದಲ್ಲಿ ಬಹು ಮುಖ್ಯವಾದುದು ಏಕಾಗ್ರತೆ. ಅಭ್ಯಾಸದಿಂದ ಏಕಾಗ್ರತೆ ಲಭಿಸುತ್ತದೆ. ಪ್ರಪಂಚದ ಕಲ್ಯಾಣಪ್ರದ ಕಾರ್ಯಕ್ಕೂ ಕರ್ಮಕೌಶಲಕ್ಕೂ ಏಕಾಗ್ರತೆಯಿಂದ ಮಹತ್ತ್ವಪೂರ್ಣ ಸಹಾಯ ಲಭಿಸುತ್ತದೆ. ಬಾಲಕರು ಬೆಳೆದಂತೆ ಅವರ ಕಲ್ಪನೆ ಹಾಗೂ ಕ್ರಿಯಾಶಕ್ತಿಗಳನ್ನು ಬೆಳೆಸಬೇಕು. ಸೌಂದರ್ಯದೃಷ್ಟಿ, ಮಹತ್ತ್ವವನ್ನು ಗೌರವಿಸುವ ದೃಷ್ಟಿ, ಉತ್ಪಾದನಾದೃಷ್ಟಿ, ಸಮತ್ವದೃಷ್ಟಿ, ವಿಮರ್ಶನದೃಷ್ಟಿ—ಇವುಗಳ ಬೆಳವಣಿಗೆಗೆ ವಿದ್ಯಾಭ್ಯಾಸಕ್ರಮದಲ್ಲಿ ಅವಕಾಶವಿರಬೇಕು. ಇವುಗಳಿಂದ ಮಾನವ ವಿಕಾಸಕ್ಕೆ ಪ್ರಯೋಜನವಿದೆ.

ಹುಟ್ಟಿದಂದಿನಿಂದ ಕಡೆಯ ಉಸಿರೆಳೆವವರೆಗೆ ಮಾನವ ವಿದ್ಯಾರ್ಥಿಯೆ. ಏಕೆ? ತಾಯಿಯ ಗರ್ಭದಲ್ಲಿರುವಾಗಲೆ ಒಂದು

ರೀತಿಯ ವಿದ್ಯಾಭ್ಯಾಸ ಆರಂಭವಾಗುತ್ತದೆ ಎಂದು ಹೇಳಬಹುದು. ಶಾಲೆಯಿಂದ ಹಾಗೂ ಪ್ರಕೃತಿ ಮತ್ತು ಸಮಾಜದಿಂದ ಒಂದು ರೀತಿಯ ಶಿಕ್ಷಣ ಲಭಿಸುತ್ತದೆ. ತಾಯಿಯ ಜೀವನ ಕ್ರಮ, ಆಚಾರವಿಚಾರಗಳೂ, ಮನೆಯ ವಾತಾವರಣವೂ ಶಿಶುವಿನ ಮೇಲೆ ಪ್ರಭಾವ ಬೀರುತ್ತವೆ. ಅನುಕರಣದಿಂದ ಕಲಿಯುವ ಅಭ್ಯಾಸ ಬಾಲಕರಲ್ಲಿ ಹೆಚ್ಚಾಗಿರುತ್ತದೆ. ಈ ಕಾರಣದಿಂದ ಹಿರಿಯರ ಜೀವನದಲ್ಲಿ ಸಂಸ್ಕೃತಿ ಹೆಚ್ಚಾಗಿರಬೇಕು. ಸರಳತೆ, ನಿಸ್ವಾರ್ಥ ದೃಷ್ಟಿ, ಧೈರ್ಯ, ಶಾಂತಿ, ಸಮತೆ—ಮೊದಲಾದವುಗಳನ್ನು ಮನೆಯ ವಾತಾವರಣದಿಂದಲೆ ಮಕ್ಕಳು ಕಲಿಯಬೇಕು. ಚಿಕ್ಕ ವಯಸ್ಸಿನಲ್ಲಿ ಕಥೆ, ದೃಷ್ಟಾಂತಗಳ ಮೂಲಕವೆ ಮಕ್ಕಳಿಗೆ ತಾತ್ವಿಕ ವಿಚಾರಗಳನ್ನು ತಿಳಿಸಬೇಕು. ಗದರಿಸುವುದರಿಂದ ಮಕ್ಕಳು ನಿಸ್ತೇಜರಾಗುತ್ತಾರೆ. ತಪ್ಪನ್ನು ಒಪ್ಪಿಕೊಳ್ಳುವ, ಜೀವನವನ್ನು ತಿದ್ದಿಕೊಳ್ಳುವ ಅಭ್ಯಾಸ ಚಿಕ್ಕಂದಿನಿಂದಲೆ ಬೆಳೆಯಬೇಕು.

ಮಕ್ಕಳ ಶಾರೀರಕ ಶಿಕ್ಷಣಕ್ಕೆ ತುಂಬ ಗಮನ ನೀಡಬೇಕು. ಇಹಲೋಕದ ವ್ಯಾಪಾರ ಮುಗಿವವರೆಗೆ ದೈಹಿಕ ಶಿಕ್ಷಣ ಮುಖ್ಯವಾದುದು. ಮಕ್ಕಳ ಅಂಗಗಳು ಸುಂದರವೂ ಸುದೃಢವೂ ಆಗಿ ಬೆಳೆಯಬೇಕು. ಆಟವೂ ರಚನಾತ್ಮಕ ಹಾಗೂ ಪ್ರಯೋಜನಾತ್ಮಕ ಕ್ರಿಯೆಗಳತ್ತ ಹರಿಯುವುದು ಉತ್ತಮ. ಮಕ್ಕಳಿಗೆ ಸಾಕಷ್ಟು ವಿಶ್ರಾಂತಿ ಅವಶ್ಯಕ. ಅವರ ದೇಹ ಸುಪುಷ್ಟವಾದಂತೆ ಅವರ ಮನಸ್ಸೂ ಸುಪುಷ್ಟವಾಗಬೇಕು. ಮನೆಯ ವಸ್ತುಗಳು ನಿರ್ಮಲವಾಗಿ ಸುಂದರವಾಗಿರುವಂತೆ ಅವರಿಗೆ ಚಿಕ್ಕಂದಿನಿಂದಲೆ ಕಲಿಸಬೇಕು. ಶ್ರೀ ಅರವಿಂದ ಆಶ್ರಮದಲ್ಲಿ ಮಕ್ಕಳ ದೈಹಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ.

ದೈಹಿಕ ಶಿಕ್ಷಣದೊಡನೆ ಪ್ರಾಣಮಯದ ಶಿಕ್ಷಣವೂ ಆವಶ್ಯಕ. ಮಗುವಿನ ಸ್ವಭಾವದ ಲೋಪದೋಷಗಳನ್ನು ತಿದ್ದುವಾಗ ಮಗುವಿನ ಮನಸ್ಸಿಗೆ ಆಘಾತವಾಗದಂತೆ ತಿದ್ದುವುದೇ ಪ್ರಾಣಮಯ ಶಿಕ್ಷಣದ ಮಾರ್ಗ. ಸ್ನೇಹ, ಪ್ರೀತಿ, ಸೇವೆ ಇತ್ಯಾದಿ ಕೋಮಲ ಭಾವಗಳ ಯುಕ್ತ ವಿಕಾಸಕ್ಕೆ ಮಕ್ಕಳ ಶಿಕ್ಷಣದಲ್ಲಿ ವಾತಾವರಣವಿರಬೇಕು. ಕೋಪ, ಉದ್ವೇಗ, ದುಃಖ ಮೊದಲಾದ ಭಾವಗಳ ಮೇಲೆ ಪ್ರಭುತ್ವ ಪಡೆವ ಮಾರ್ಗ ಶಿಕ್ಷಣದ ಅಂಗವಾಗಿ ಮಕ್ಕಳಿಗೆ ದೊರಕಬೇಕು. ಸ್ವಭಾವವನ್ನು ಪರಿವರ್ತಿಸುವ ಪ್ರಾಣಮಯ ಶಿಕ್ಷಣ ಇಂದು ಸಮಾಜದಲ್ಲಿ ದೊರಕುತ್ತಿಲ್ಲ. ಅತ್ತ ಕಡೆಗೆ ಗಮನಕೊಡುವುದು ಆವಶ್ಯಕ.

ಇಂದು ಸಾಮಾನ್ಯವಾಗಿ ದೊರಕುವ ಶಿಕ್ಷಣ ಮಾನಸಿಕವಾದುದು. ಮಾನಸಿಕ ಶಿಕ್ಷಣದಲ್ಲಿ ಏಕಾಗ್ರತೆಗೆ ಹೆಚ್ಚಿನ ಪ್ರಾಮುಖ್ಯತೆ ಆವಶ್ಯಕ. ಮಕ್ಕಳು ಅಂತರ್ಮುಖಿಗಳಾಗಿ ಯೋಚಿಸಲು ಯುಕ್ತ ಸನ್ನಿವೇಶಗಳನ್ನು ಸೃಷ್ಟಿಸಬೇಕು. ಶಾಂತಿ ಹಾಗೂ ವಿಚಾರ, ಮನಸ್ಸಿನ ಪ್ರಗತಿಗೆ ಆವಶ್ಯಕ. ಮನಸ್ಸಿನ ಚಾಂಚಲ್ಯವನ್ನು ಹೋಗಲಾಡಿಸುವ ವಿಧಾನದ ಶಿಕ್ಷಣ, ಮಕ್ಕಳಿಗೆ ಚಿಕ್ಕಂದಿನಿಂದಲೆ ತಿಳಿಯಬೇಕು. ಮನಸ್ಸನ್ನು ಪ್ರಶಾಂತಗೊಳಿಸುವ ಮಾರ್ಗ ತಿಳಿದರೆ ಜೀವನದಲ್ಲಿ ಹೊಸ ಆನಂದ ಮೂಡುತ್ತದೆ.

ಪ್ರಪಂಚದಲ್ಲಿ ಆಧ್ಯಾತ್ಮಿಕ ಶಿಕ್ಷಣದ ಅಭಾವವಿದೆ. ಯಾವುದಾದರೂ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಜೀವನಕ್ಕೆ ಉದ್ಯೋಗ ಸಿಕ್ಕಿದರೆ ಅಲ್ಲಿಗೆ ಶಿಕ್ಷಣ ಮುಗಿಯಿತೆಂಬ ಭಾವನೆ ಸಾಮಾನ್ಯರಲ್ಲಿದೆ. ಆಧ್ಯಾತ್ಮಿಕ ಭಾವನೆಗಳ ವಿಚಾರ ಹಲವರಿಗೆ ತಿಳಿದಿಲ್ಲ. ಜೀವನವೆಂದರೇನು? ಜೀವನದಲ್ಲಿ ಸಾಧಿಸಬೇಕಾದುದೇನು? ಎಂಬುದರ ಪರಿಭಾವನೆ ಇಂದಿನ ಶಿಕ್ಷಣದಲ್ಲಿ ದೊರಕುವುದು ವಿರಳ.

ಆತ್ಮಸಾಕ್ಷಾತ್ಕಾರದ ಮಾರ್ಗಗಳನ್ನು ತೋರುವ ಆಧ್ಯಾತ್ಮಿಕ ಶಿಕ್ಷಣ ಎಲ್ಲರಿಗೂ ದೊರಕಬೇಕು. ಉದ್ವಿಗ್ನರಾಗದೆ, ವಿಕ್ಷುಬ್ಧರಾಗದೆ ಪ್ರತಿಭೆಯ ನೆರವಿನಿಂದ ಆಂತರಿಕ ವಾಣಿಯತ್ತ ಕಿವಿಗೊಡುವ ಶಕ್ತಿಯನ್ನು ವಿದ್ಯಾರ್ಥಿಗಳು ಪಡೆಯುವಂತಾಗಬೇಕು. ಇದು ಕ್ರಮಕ್ರಮವಾಗಿ ಲಭಿಸುವ ಶಕ್ತಿ. ಇಂತಹ ಶಿಕ್ಷಣದಿಂದ ವಿದ್ಯಾರ್ಥಿ ವಿಚಾರಪರನಾಗುತ್ತಾನೆ, ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ತನ್ನ ವ್ಯಕ್ತಿತ್ವವನ್ನೂ ಶಾಂತಿಯನ್ನೂ ನಾಶಮಾಡಿಕೊಳ್ಳದೆ ಸ್ಥಿರ ಚಿತ್ತವನ್ನು ಪಡೆಯಲು ಆಧ್ಯಾತ್ಮಿಕ ಶಿಕ್ಷಣ ಸಹಾಯ ಮಾಡುತ್ತದೆ. ನಾಮರೂಪಗಳ ಸೀಮೆಯಾಚೆಯಿಂದ ನವ ಶಕ್ತಿಯನ್ನು ಆಹ್ವಾನಿಸುವ ಶಕ್ತಿ ಲಭಿಸಿದರೆ, ಜೀವನದ ಗತಿಯೇ ಬದಲಾಯಿಸುತ್ತದೆ. ಇಂತಹ ವಿದ್ಯೆ ವಿದ್ಯಾರ್ಥಿಗಳಿಗೆ ಲಭಿಸಬೇಕಾದರೆ, ಗುರುವಿನ ಜೀವನ, ಬೋಧನೆ, ಪ್ರಭಾವ ಬಹಳ ಮುಖ್ಯ. ಅಂತಹ ಶಿಕ್ಷಣದಿಂದ ಮೂಡಿಬರುತ್ತದೆ ದಿವ್ಯ ಜೀವನ.

## ೬. ಮಾರ್ಗದರ್ಶನ

ಶಿಷ್ಯರ ಸಂಖ್ಯೆ ಬೆಳೆದಂತೆ ಅವರ ಪ್ರಶ್ನೆಗಳಿಗೆ ಲಿಖಿತ ಮೂಲಕ ಉತ್ತರ ನೀಡಲು ಆರಂಭಿಸಿದರು ಶ್ರೀ ಅರವಿಂದರು. ಅವರು ಬರೆದ ಪತ್ರಗಳ ಸಂಖ್ಯೆ ಅಪಾರ. ಅವುಗಳಲ್ಲಿ ಹಲವನ್ನು ಆಯ್ದು ಸುಮಾರು ನಾಲ್ಕು ಸಂಪುಟಗಳಲ್ಲಿ ಈಗಾಗಲೆ ಪ್ರಕಟಿಸಿದ್ದಾರೆ. ದೇಶವಿದೇಶಗಳಿಂದ ಸಾಧಕರು ಬರೆಯುತ್ತಿದ್ದ ಪತ್ರಗಳಿಗೆ ಅವರು ಉತ್ತರ ಬರೆಯಲು ದಿನಕ್ಕೆ ಸುಮಾರು ೧೦-೧೨ ಗಂಟೆಗಳ ಕಾಲ ಬೇಕಾಗುತ್ತಿತ್ತು. ಈ ಕಾರ್ಯಕ್ಕೆ ಮಹಾಯೋಗಿಯ ಮಾನವಪ್ರೇಮವೇ ಕಾರಣವಾಗಿತ್ತು. ಅವರು ನೀಡಿದ ಉತ್ತರಗಳಿಂದ ಮಾರ್ಗದರ್ಶನದ ಬೆಳಕು ಸುಪ್ರಕಟ.

ರೇತಸ್ಸನ್ನು ಓಜಸ್ಸಾಗಿ ಪರಿವರ್ತಿಸುವುದನ್ನು ಕುರಿತು ಅವರು ಬರೆದ ಒಂದು ಪತ್ರದಲ್ಲಿ ಮಾರ್ಗದರ್ಶನ ಹೀಗಿದೆ :

ಭೌತಿಕ ಶರೀರದ ಮೂಲಭೂತ ಶಕ್ತಿಯೊಂದಿದೆ. ಅದರಲ್ಲಿ ತೇಜಸ್ಸು, ಶಕ್ತಿ, ಬೆಳಕು ಸುಪ್ತವಾಗಿದೆ. ಈ ಸುಪ್ತ ಶಕ್ತಿಯೇ ರೇತಸ್ಸು. ಉದ್ರೇಕ, ಕಾಮ, ಆಸೆಗಳಿಂದ ಈ ಶಕ್ತಿ ಪ್ರಯೋಗವಾಗುತ್ತದೆ. ಈ ರೇತಸ್ಸು ಶಕ್ತಿವರ್ಧಕವಾಗುವುದು ಬ್ರಹ್ಮಚರ್ಯದಿಂದ. ಹೀಗೆ ವರ್ಧಿಸಿದ ಶಕ್ತಿ ಪರಿವರ್ತಿತವಾಗುತ್ತದೆ. ಪ್ರಾಚೀನ ಭಾರತೀಯರ ದೃಷ್ಟಿಯಲ್ಲಿ ಈ ರೇತಸ್ಸೇ ತೇಜಸ್ಸು. ಈ ತೇಜಸ್ಸು ಎಲ್ಲ ಜ್ಞಾನಕ್ಕೂ ಆಕರ. ಇದು ದೈಹಿಕ ಬೌದ್ಧಿಕ ರೂಪವಾದ ವಿದ್ಯುತ್ ಆಗುತ್ತದೆ. ಇದೇ ವೀರ್ಯವಾಗುವುದು. ಓಜಸ್ಸಾಗುವುದು. ಬ್ರಹ್ಮಚರ್ಯದಿಂದಲೆ ತೇಜಸ್ಸು ಮತ್ತು ಓಜಸ್ಸುಗಳನ್ನು ಪಡೆಯುವುದು. ಓಜಸ್ಸಿನಿಂದ ದೇಹ ಮನಸ್ಸು ಅಂತಃಪುರುಷ— ಎಲ್ಲವೂ ಭಗವನ್ಮುಖವಾಗುವುದು.

ಗಂಡು ಹೆಣ್ಣಿನ ಪ್ರೇಮವನ್ನು ಕುರಿತು ಶ್ರೀ ಅರವಿಂದರು ಹೀಗೆ ಬರೆದಿದ್ದಾರೆ :

ಲೌಕಿಕವಾದ ಮಾನವ ಪ್ರೇಮ ಅಹಂಕಾರದೊಡನೆ ಪ್ರಬಲವಾಗಿ ಮಿಶ್ರಣವಾಗಿರುತ್ತದೆ. ಆದ್ದರಿಂದಲೆ ಅದು ಶುದ್ಧವಾಗಿರುವುದಿಲ್ಲ. "ಪತ್ನಿಯನ್ನು ಪ್ರೀತಿಸುವುದು ಪತ್ನಿಗಾಗಿಯಲ್ಲ. ತನ್ನ ಆತ್ಮಕ್ಕಾಗಿಯೆ" ಎಂದು ಹೇಳಿದೆ ಉಪನಿಷತ್ತಿನಲ್ಲಿ. ಪ್ರತಿಫಲದ ನಿರೀಕ್ಷಣೆಗಾಗಿಯೊ ಇತರ ಅನುಕೂಲಕ್ಕಾಗಿಯೊ ಅಥವಾ ಮಾನಸಿಕ ದೈಹಿಕ ಸುಖಕ್ಕಾಗಿಯೊ ಸಾಮಾನ್ಯವಾಗಿ ಮಾನವರು ಪರಸ್ಪರ ಪ್ರೀತಿಸುವುದು. ಇಂತಹ ಪ್ರೇಮ, ಪ್ರತಿಫಲ ದೊರಕದಿದ್ದರೆ ಬಹು ಬೇಗನೆ ಇಂಗಿಹೋಗುತ್ತದೆ. ಪ್ರತಿಫಲ ದೊರಕದಿದ್ದಾಗ ಅಸಡ್ಡೆಯಾಗಿ ಕಡೆಗೆ ದ್ವೇಷವಾಗಿ ಪರಿಣಮಿಸುತ್ತವೆ.

ಮನುಷ್ಯನ ಪ್ರಾಣಮಯ ಪ್ರೇಮ ಯಾವಾಗಲೂ ಪ್ರಬಲ ಅಹಂಕಾರ ಹಾಗೂ ಕಾಮನೆಗಳಿಂದ ತುಂಬಿರುತ್ತದೆ. ಈ ಪ್ರೇಮ ತನ್ನ ಆಶೆಗಳನ್ನು ಪೂರ್ಣಗೊಳಿಸಿಕೊಳ್ಳಲು ಹಾರೈಸುತ್ತದೆ; ತನಗೆ ಬೇಕಾದುದನ್ನು ಪಡೆಯದಿದ್ದರೆ, ತಾನು ಪ್ರೀತಿಸುವ ವ್ಯಕ್ತಿಯನ್ನು ತಪ್ಪಾಗಿ ತಿಳಿಯುತ್ತದೆ. ಅಸೂಯೆ ಪಡುತ್ತದೆ. ಕಡೆಗೆ ಕೋಪತಾಪಗಳಿಗೆ ವಶವಾಗಿ ಪ್ರೇಮಿಸುವುದನ್ನೇ ನಿಲ್ಲಿಸುತ್ತದೆ. ಅಂತ್ಯದಲ್ಲಿ ಇಂತಹ ಪ್ರೇಮ ನಾಮಾವಶೇಷವಾಗುತ್ತದೆ. ಕಷ್ಟಕ್ಕೆ, ನಿರಾಶೆಗೆ, ಭ್ರಾಂತಿಗೆ ಕಾರಣವಾಗುತ್ತದೆ, ಇಂಥ ಪ್ರೇಮ. ಅತಿ ಲೌಕಿಕವಾದ ಇಂತಹ ಪ್ರೇಮ ಹೆಚ್ಚು ಕಾಲ ನಿಲ್ಲಲಾರದು !

ಸಾಧಕರಿಗೆ ಬರೆದ ಪತ್ರಗಳಲ್ಲಿ ಕಾಣುವ ಈ ಉತ್ತರದಲ್ಲಿ ಶ್ರೀ ಅರವಿಂದರ ವಿಚಾರ ಧಾರೆಯನ್ನೂ ಯೌಗಿಕ ಕಾಂತಿಯನ್ನೂ ಸಂದರ್ಶಿಸುತ್ತೇವೆ. ಅವರ ಕೃತಿಗಳಲ್ಲಿ ಬರುವ ಕೆಲವು ಅಮೃತ ಬಿಂದುಗಳನ್ನು ಮುಂದೆ ಕೊಟ್ಟಿದೆ.

ಭಗವಂತನನ್ನು ಜೀವನದಲ್ಲಿ ಸುಪ್ರಕಟಗೊಳಿಸುವುದೇ ಮಾನವ ಜೀವನದ ಉದ್ದೇಶ.

* * *

ನಿಮ್ಮಲ್ಲಿ ಎಂತಹ ದೋಷಗಳೇ ಇರಲಿ, ಭಗವಂತನನ್ನು ಪ್ರೀತಿಸಿ. ಅವನ ಸಂದರ್ಶನಕ್ಕಾಗಿ ಹಾರೈಸಿ. ಅವನ ಮನೆಯ ಬಾಗಿಲು ಎಂದೂ ಮುಚ್ಚಿರುವುದಿಲ್ಲ.

* * *

ಸೂರ್ಯಕಾಂತಿ ಸೂರ್ಯನತ್ತ ಮುಖ ತಿರುಗಿಸಿ ಅರಳುವಂತೆ, ಆತ್ಮವೂ ಕೂಡ ಭಗವದಭಿಮುಖವಾಗುವುದು ಸ್ವಾಭಾವಿಕ.

* * *

ನನ್ನಲ್ಲಿ ಗುಪ್ತವಾಗಿರುವ ಅಸ್ಪೃತತ್ವ, ಐಕ್ಯತೆ, ಸ್ವಾತಂತ್ರ್ಯ ಗಳು ತಮ್ಮನ್ನು ತಾವು ಪ್ರಕಾಶಪಡಿಸಲು ಕಾದಿವೆ.

* * *

ಪರರ ದೋಷಗಳನ್ನು ಹುಡುಕುವುದರಲ್ಲಿಯೆ ನಿರತರಾಗಬೇಡಿ. ಅವರಿಂದ ಪ್ರಯೋಜನವಿಲ್ಲ. ಶಾಂತವಾಗಿರುವುದನ್ನು ಅಭ್ಯಾಸ ಮಾಡಿ.

* * *

ಕಾಯಕವು ಕೆಳದರ್ಜೆಯದೆಂದು ಭಾವಿಸಬೇಡಿ. ಬುದ್ಧಿ ಜೀವಿಗಳೇ ಕಾಯಕವನ್ನು ಹೀನವೆಂದು ಭಾವಿಸುವುದು. ಭಗವದರ್ಪಿತ ಕಾಯಕಕ್ಕಿಂತ ಸ್ವಾರ್ಥ ಮೂಲವಾದ ಪಾಂಡಿತ್ಯ ಕೀಳಾದುದು. ಭಗವದರ್ಪಿತ ಕಾಯಕ ದಿವ್ಯವಾದುದು. ವಿದ್ವಾಂಸನಾಗುವುದೇ ಸರ್ವೋತ್ಕೃಷ್ಟವೆಂದು ಬಗೆದು, ಕಾಯಕವನ್ನು ತಿರಸ್ಕರಿಸುವುದು ಅಹಂಕಾರ.

* * *

ಮನಸ್ಸು ಚಂಚಲವಾಗಿರುವಾಗ ಅದು ಯೋಗದಲ್ಲಿ ನೆಲಸುವ ಸಂಭವವಿಲ್ಲ. ಪ್ರಥಮತಃ ಮನಸ್ಸು ನಿಶ್ಚಲವಾಗಬೇಕು. ವ್ಯಕ್ತಿಯ ಜೀವನವನ್ನು ಲುಪ್ತಗೊಳಿಸುವುದು ಯೋಗದ ಉದ್ದೇಶವಲ್ಲ. ಜೀವನವನ್ನು ಆಧ್ಯಾತ್ಮಿಕ ಪ್ರಜ್ಞೆಯಲ್ಲಿ ಅರಳಿಸುವುದೇ ಯೋಗದ ಮೊದಲ ಕರ್ತವ್ಯ. ಈ ಕಾರಣಕ್ಕಾಗಿ ನಿಶ್ಚಲಮನಸ್ಸು ಆವಶ್ಯಕ.

* * *

ಭಗವತ್‌ಶಕ್ತಿಯನ್ನು ಪಡೆಯಲು ಮತ್ತು ಆ ಶಕ್ತಿ ಬಾಹ್ಯ ಜೀವನಕ್ಷೇತ್ರದಲ್ಲಿ ಕ್ರಿಯಾತ್ಮಕವಾಗಲು ಮೂರು ಮುಖ್ಯ ನಿಯಮಗಳಿವೆ :

(೧) ಅಚಂಚಲತೆ, ಸಮತೆ—ಏನಾದರಾಗಲಿ ಕ್ಷೋಭೆ

ಗೊಳ್ಳಬಾರದು. ಮನಸ್ಸನ್ನು ಸ್ಥಿರ ಹಾಗೂ ದೃಢವಾಗಿಡಬೇಕು. ಜೀವನವನ್ನು ಕ್ಷೋಭೆಗೊಳಿಸುವ ಶಕ್ತಿಗಳ ಲೀಲೆಯನ್ನು ವೀಕ್ಷಿಸಬೇಕು. ಆದರೆ ಮನಸ್ಸು ಮಾತ್ರ ಪ್ರಶಾಂತವಾಗಿರಬೇಕು.

(೨) **ನಿಶ್ಚಲಶ್ರದ್ಧೆ**—ಆಗುವುದೆಲ್ಲ ಒಳಿತಿಗಾಗಿ ಎಂಬ ಶ್ರದ್ಧೆ ಇರಲಿ. ವ್ಯಕ್ತಿ ನಿಮಿತ್ತಮಾತ್ರವಾದ ಯಂತ್ರವಾದರೆ ದೈವೀ ಜ್ಯೋತಿಯೇ ಕರ್ತವ್ಯಕರ್ಮದ ಮಾರ್ಗದರ್ಶನ ಮಾಡಿಸುತ್ತದೆ.

(೩) **ಗ್ರಹಣಸಾಮರ್ಥ್ಯ**—ದೈವೀಶಕ್ತಿಯನ್ನು ಗ್ರಹಿಸುವ ಸಾಮರ್ಥ್ಯವನ್ನು ಪಡೆದು, ಆದರ ಮತ್ತು ಶ್ರೀಮಾತೆಯ ಸಾನ್ನಿಧ್ಯವನ್ನು ಅನುಭವಿಸಿ, ಆ ಶಕ್ತಿ, ಕಾರ್ಯದಲ್ಲಿ ಪ್ರವೃತ್ತವಾಗುವಂತೆ ಮಾಡಿ. ಆ ಶಕ್ತಿಯೇ ಸಾಧಕನ ದೃಷ್ಟಿ, ಸಂಕಲ್ಪ ಮತ್ತು ಕರ್ಮಗಳಿಗೆ ಮಾರ್ಗದರ್ಶಕ.

* * *

ಮಾನವ ಮನಸ್ಸಿನಂತಾಗಲಿ ಮಾನವರಚಿತ ಆಕೃತಿಗಳಂತಾಗಲಿ ಭಗವಂತನ ಮಾರ್ಗವಿರುವುದಿಲ್ಲ. ಅವನ ನಿಯತಿಯನ್ನು ಪರೀಕ್ಷಿಸುವುದು ಅಸಾಧ್ಯ. ಅವನು ಹೀಗೆ ನಡೆಯಬೇಕು ಅಥವಾ ಹೀಗೆ ನಡೆಯಬಾರದು—ಎಂದು ನಿಯಾಮಕ ಮಾಡುವುದೂ ಸಾಧ್ಯವಿಲ್ಲ. ನಮಗಿಂತಲೂ ಭಗವಂತನಿಗೆ ಎಲ್ಲವೂ ಚೆನ್ನಾಗಿ ತಿಳಿದಿರುತ್ತದೆ.

* * *

ಜೀವನ ಮತ್ತು ಜೀವನದ ಕಷ್ಟಗಳನ್ನು ಧೈರ್ಯ ಮತ್ತು ದೃಢತೆಯಿಂದ ಎದುರಿಸುವ ಸಾಹಸವಿಲ್ಲದವರು, ಸಾಧನದ ಕಠಿಣತರ ಆಂತರಿಕ ಕಷ್ಟಗಳನ್ನು ಎದುರಿಸಲು ಅಶಕ್ತರಾಗುತ್ತಾರೆ. ಈ ಯೋಗದ ಮೊದಲ ಪಾಠವೆಂದರೆ ಜೀವನ ಮತ್ತು ಅದರ ಪರೀಕ್ಷೆಗಳನ್ನು ಪ್ರಶಾಂತಮನಸ್ಸಿನಿಂದಲೂ ದೃಢಸಾಹಸದಿಂದಲೂ

ಭಾಗವತ ಶಕ್ತಿಯ ಸಂಪೂರ್ಣ ಆಶ್ರಯ ಪಡೆಯುವುದರಿಂದಲೂ ಎದುರಿಸುವುದು!

* * *

ಸಂಪತ್ತು ಭಗವಂತನಿಗೆ ಸೇರಿದ್ದು. ಧನಿಕನಾಗುವುದೆಂದರೆ ಅದರ ಸದ್ವಿನಿಯೋಗಕ್ಕೆ ನ್ಯಾಸಧಾರಿಯಾಗುವುದು. ಸಂಪತ್ತು ಸಾತ್ವಿಕರ ವಶವಾಗಬೇಕು; ಆಸುರೀಶಕ್ತಿಗಳ ಕೈವಶವಾಗ ಬಾರದು.

* * *

ಆಧ್ಯಾತ್ಮಿಕಜೀವನದಲ್ಲಿ ಎಲ್ಲ ಕರ್ಮಗಳೂ ಸಮ; ದೊಡ್ಡದು ಸಣ್ಣದು ಎಂಬ ಭಾವನೆ ಇರುವುದಿಲ್ಲ. ಸಾಹಿತಿಗಳು ಕಾವ್ಯಸೃಷ್ಟಿ ಶ್ರೇಷ್ಠವೆಂದು ಭಾವಿಸಿ ಅಡಿಗೆ ಮಾಡುವುದು, ಚಪ್ಪಲಿ ಹೊಲಿಯು ವುದು ಮೊದಲಾದ ಕಾರ್ಯಗಳನ್ನು ಅಲ್ಪವೆಂದು ಹೇಳಬಹುದು. ಆತ್ಮನಿಗೆ ಎಲ್ಲ ಕರ್ಮಗಳೂ ಸಮ. ಯಾವ ಕರ್ಮವನ್ನಾಗಲಿ ನಿಷ್ಠೆಯಿಂದ, ಶ್ರದ್ಧೆಯಿಂದ, ಮಾಡಿದರೆ ಅದರಲ್ಲಿ ಮಹತ್ವ ಪ್ರಕಟ ವಾಗುತ್ತದೆ. ಯಾವ ಕರ್ಮವಾಗಲಿ ತನಗೆ ತಾನೇ ಮಹತ್ವಾ ದುದೂ ಅಲ್ಲ, ಅಲ್ಪವಾದುದೂ ಅಲ್ಲ.

* * *

ಇಂತಹ ಮಾರ್ಗದರ್ಶನದ ಬೆಳಕು ಅವರ ನಿರ್ದೇಶನದಲ್ಲಿ ಬೆಳಗುತ್ತದೆ. ಶ್ರೀ ಅರವಿಂದರ ಕೃತಿಗಳ ಅಧ್ಯಯನದಿಂದ ಹೊಸ ದೃಷ್ಟಿಯೂ ಹೊಸ ಅಭಿರುಚಿಯೂ ಚೇತನದಲ್ಲಿ ಮೂಡಿ ನವ ಜೀವನಪಥ ದೃಗ್ಗೋಚರವಾಗುತ್ತದೆ.

## ೭. ಶ್ರೀ ಅರವಿಂದಾಶ್ರಮ

ಆಧುನಿಕ ವೈಜ್ಞಾನಿಕ ಹಾಗೂ ಸಾಮಾಜಿಕ ಪ್ರಗತಿಗಳನ್ನು ಗಮನಿಸಿದ ಶ್ರೀಮಾತೆ ಪ್ರಾಚೀನ ಭಾರತದ ಗುರುಕುಲಗಳ

ಆವರ್ಷದಲ್ಲಿ ಆಶ್ರಮವನ್ನು ಬೆಳೆಸಿದರು. ಸಾಧಕರ ಸಂಖ್ಯೆ ಬೆಳೆ
ದಂತೆ ಹೊಸ ವಸತಿಗಳು ಅವಶ್ಯಕವಾದುವು. ಈ ಕಾರಣದಿಂದ
ಶ್ರೀ ಅರವಿಂದಾಶ್ರಮ ಒಂದೇ ಕಡೆ ವ್ಯವಸ್ಥಿತವಾಗಿ ಬೆಳೆಯಲಿಲ್ಲ.
ಈಗ ಆಶ್ರಮಕ್ಕೆ ಸೇರಿದ ಮನೆಗಳೂ ಹೊಲಗಳೂ ತೋಟಗಳೂ
ಪಾಂಡಿಚೆರಿಯ ಬೇರೆ ಬೇರೆ ಸ್ಥಳಗಳಲ್ಲಿವೆ. ಇಂದು ಆಶ್ರಮ
ದಲ್ಲಿರುವವರ ಸಂಖ್ಯೆ ಸುಮಾರು ಒಂದು ಸಾವಿರ. ಅವರಲ್ಲಿ
ಕೆಲವರು ಆಧುನಿಕ ವಿದ್ಯಾಭ್ಯಾಸ ಪಡೆದವರು. ಮತ್ತೆ ಕೆಲವರು
ಕಲಾವಿದರು. ಇನ್ನು ಕೆಲವರು ಯಂತ್ರತಜ್ಞರು. ಮತ್ತೆ ಕೆಲವರು
ಕೇವಲ ಯೋಗಸಾಧನೆಯಲ್ಲಿ ಶ್ರದ್ಧೆಯನ್ನಿಟ್ಟು ಬಂದವರು.
ಹೀಗೆ ಭಿನ್ನಭಿನ್ನ ಅಭಿರುಚಿಯುಳ್ಳವರು ಅಲ್ಲಿ ಸೇರಿದ್ದಾರೆ. ಆಶ್ರಮಕ್ಕೆ
ಸೇರಲು ಮುಖ್ಯವಾದ ಅರ್ಹತೆಯೆಂದರೆ ಸಂಪೂರ್ಣ ಸಮರ್ಪಣ
ಭಾವ. ಆಶ್ರಮಕ್ಕೆ ಸೇರಿದ ಸಾಧಕರಲ್ಲಿ ಭೇದಭಾವವಿಲ್ಲ. ಯಾವ
ಕೆಲಸವನ್ನಾದರೂ ಅವರು ಸಾಧನೆಯೆಂದೇ ಮಾಡುತ್ತಾರೆ. ಆ
ಕೆಲಸ ದೊಡ್ಡದು, ಈ ಕೆಲಸ ಚಿಕ್ಕದು ಎಂಬ ಭಾವನೆ ಆಶ್ರಮ
ದಲ್ಲಿಲ್ಲ. ಶ್ರೀಮಾತೆಯೇ ಅಲ್ಲಿನ ನೇತಾರರಾಗಿದ್ದರು. ಆಧ್ಯಾತ್ಮಿಕ
ಜೀವನಕ್ಕೆ ಯೋಗ್ಯರಾದವರನ್ನು ಸೇರಿಸಿಕೊಳ್ಳುವ ಹೊಣೆ
ಆಶ್ರಮದ್ದು.

ಧ್ಯಾನ, ಕರ್ಮ, ಸೇವೆ, ಜ್ಞಾನ—ಇವುಗಳಿಗೆ ಆಶ್ರಮದಲ್ಲಿ
ಸಮಾನವಾದ ಅವಕಾಶವಿದೆ. ಕರ್ಮವೇ ದೇಹದಿಂದ ಮಾಡುವ
ಪ್ರಾರ್ಥನೆ ಎಂದಿದ್ದಾರೆ ಶ್ರೀಮಾತೆ. ಶ್ರದ್ಧಾಪೂರ್ಣ ಕರ್ಮ
ಆಶ್ರಮದಲ್ಲಿ ಮುಖ್ಯ. ಮಾಡುವ ಕೆಲಸದಲ್ಲಿ ಶ್ರದ್ಧೆ ಇರಲಿ,
ಚಿತ್ತಶುದ್ಧಿ ಇರಲಿ ಎಂದರು ಶ್ರೀಮಾತೆ.

ಮಾನವನ ಪರಿಪೂರ್ಣ ವಿಕಾಸಕ್ಕೆ ದೇಹದ ವಿಕಾಸವೂ
ಅವಶ್ಯಕವೆಂದು ಶ್ರೀಮಾತೆ ಖಚಿತವಾಗಿ ಹೇಳಿದರು. ಅವರ

ನಿರ್ದೇಶನದಲ್ಲಿ ಹಲವು ರೀತಿಯ ವ್ಯಾಯಾಮಗಳು ಯೋಜಿತವಾದವು ಅಂಗಸಾಧನೆ, ಕುಸ್ತಿ, ಈಜುವುದು, ಟೆನ್ನಿಸ್ ಮೊದಲಾದ ಆಟಗಳು—ಇವೆಲ್ಲ ಆಶ್ರಮದ ಸಾಧಕರಿಗೆ ಒದಗಿಸಿರುವ ಸೌಲಭ್ಯಗಳು. "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬ ಮಾತು ಆಶ್ರಮದಲ್ಲಿ ಜೀವಂತವಾಗಿದೆ. ವಿದ್ಯಾರ್ಥಿ ವಿದ್ಯಾರ್ಥಿನಿಯರು ಸಮುದ್ರದ ಅಲೆಗಳಲ್ಲಿ ನುಗ್ಗಿ, ಅಲೆಗಳಿಗೆ ಎದೆಯೊಡ್ಡಿ ನಿಲ್ಲುವ ದೃಶ್ಯ ಆನಂದದಾಯಕ. ಆರೋಗ್ಯಸಾಧನೆಗೆ ಆಶ್ರಮದಲ್ಲಿ ವಿಶೇಷ ಪ್ರೋತ್ಸಾಹವಿದೆ. ಸಾಮಾನ್ಯವಾಗಿ ಸ್ತ್ರೀ ಅಬಲೆ, ಗಂಡಸಿನ ಭೋಗಕ್ಕಾಗಿ ಸೃಷ್ಟಿಯಾದವಳೆಂಬ ಭಾವನೆ ಕೆಲವರಲ್ಲಿರಬಹುದು. ಅಂತಹ ಭಾವನೆ ಶ್ರೀ ಅರವಿಂದಾಶ್ರಮದಿಂದ ದೂರವಾಗಿ ಭಗವಂತನ ಮುಂದೆ ಸ್ತ್ರೀಯರೂ ಸಮಾನರೆಂಬ ದೃಷ್ಟಿ ಬೆಳೆದಿದೆ. ಮಹಿಳೆಯರು ಮಿರುಮಿರುಗುವ ಸೀರೆಯನ್ನುಟ್ಟು ಆಭರಣಗಳಿಂದ ಅಲಂಕೃತರಾಗಿ ಹಾವ ಭಾವ ವಿಲಾಸಗಳಿಂದ ಆಕರ್ಷಣೀಯರಾಗಿರಬೇಕೆಂಬ ಮನೋವೃತ್ತಿ ಆಶ್ರಮದಲ್ಲಿಲ್ಲ. ಸ್ತ್ರೀಯರೂ ವ್ಯಾಯಾಮದಿಂದ ಆರೋಗದೃಢಕಾಯರಾಗಿದ್ದಾರೆ.

ಶ್ರೀ ಅರವಿಂದಾಶ್ರಮದ ಭೋಜನ ವ್ಯವಸ್ಥೆ ತುಂಬ ಅಚ್ಚುಕಟ್ಟು. ಅಲ್ಲಿನ ಶಿಸ್ತು, ನೈರ್ಮಲ್ಯ ಅನುಸರಣೀಯ. ವಿದ್ಯಾರ್ಥಿನಿಲಯದ ಮೇಲ್ವಿಚಾರಕರಾಗಿರುವವರು ಒಮ್ಮೆ ಇಲ್ಲಿಯ ಭೋಜನ ವ್ಯವಸ್ಥೆಯನ್ನು ನೋಡಿ ಕಲಿಯುವ ವಿಚಾರಗಳು ಬಹಳವಿವೆ. ಒಂದೇ ಬಾರಿಗೆ ಸುಮಾರು ಒಂದು ಸಾವಿರ ಮಂದಿ ಊಟಕ್ಕೆ ಕುಳಿತುಕೊಳ್ಳುವ ದೊಡ್ಡ ಭವನವಿದೆ. ಬೆಳಗಿನ ಉಪಾಹಾರಕ್ಕೆ ಬ್ರೆಡ್ಡು, ಬಾಳೆಹಣ್ಣು ಮತ್ತು ಒಂದು ಲೋಟ ಹಾಲು. ಮಧ್ಯಾಹ್ನದ ಊಟಕ್ಕೆ ಅನ್ನ, ಬ್ರೆಡ್ಡು, ಹುಳಿ, ಒಂದು ಬಟ್ಟಲು ಮೊಸರು, ಬಾಳೆಹಣ್ಣು, ಲಿಂಬೆಹಣ್ಣಿನ ಚೂರು. ರಾತ್ರಿಯ

ಊಟಕ್ಕೆ ಹಾಲು, ಬ್ರೆಡ್ಡು, ಬಾಳೆಯ ಹಣ್ಣು. ಆಹಾರ ಸರಳವಾದರೂ ದೇಹದ ಪೋಷಣೆಗೆ ಯುಕ್ತವಾಗಿದೆ. ಅಡಿಗೆಯ ಕೆಲಸ, ಬಡಿಸುವುದು, ನೈರ್ಮಲ್ಯಕಾರ್ಯ—ಎಲ್ಲವನ್ನೂ ಆಶ್ರಮದವರೇ ಮಾಡುತ್ತಾರೆ. ಅಲ್ಲಿ ಬಡಿಸುವ ರೀತಿ ವಿಶಿಷ್ಟವಾದುದು. ತೊಳೆದು ಶುದ್ಧಮಾಡಿ ಜೋಡಿಸಿಟ್ಟ ತಟ್ಟೆಗಳಲ್ಲಿ ಒಂದನ್ನು ತೆಗೆದುಕೊಂಡು, ಬಡಿಸುವವರು ನಿಂತಿರುವ ಮೇಜಿನ ಬಳಿಗೆ ಹೋದರೆ, ಒಬ್ಬರು ಅನ್ನಬಡಿಸುತ್ತಾರೆ. ಮತ್ತೊಬ್ಬರು ಹುಳಿಯನ್ನೂ ಬ್ರೆಡ್ಡನ್ನೂ ನೀಡುತ್ತಾರೆ. ಇನ್ನೊಬ್ಬರು ಬಾಳೆಹಣ್ಣು ಮತ್ತು ಲಿಂಬೆಹಣ್ಣಿನ ಚೂರನ್ನು ಬಡಿಸುತ್ತಾರೆ. ಈ ಪದಾರ್ಥಗಳಿಂದ ತುಂಬಿದ ತಟ್ಟೆಯನ್ನು ತೆಗೆದುಕೊಂಡು ಮುಂದೆ ಹೋದರೆ ಶುಚಿಯಾದ ಲೋಟದಲ್ಲಿ ನೀರನ್ನು ತುಂಬಿಕೊಂಡು ಊಟಕ್ಕೆ ಹೋಗಿ ಕುಳಿತುಕೊಳ್ಳಬೇಕು. ತಟ್ಟೆಯನ್ನಿಡಲು ಪುಟ್ಟ ಮಣೆ, ಅದರಮೇಲೆ ಶುದ್ಧವಾದ ಬಿಳಿಯ ಬಟ್ಟೆಯ ಹೊದಿಕೆ. ಭೋಜನಮಂದಿರ ಶುಭ್ರವಾಗಿರುವುದರಿಂದ ನೊಣಗಳು ಅಲ್ಲಿ ಸುಳಿಯುವುದಿಲ್ಲ. ಊಟವಾದ ಬಳಿಕ ತಟ್ಟೆ, ಬಟ್ಟಲು, ಲೋಟಗಳನ್ನು ತೆಗೆದುಕೊಂಡು ತೊಳೆಯುವ ಸ್ಥಳಕ್ಕೆ ಹೋಗಬೇಕು. ತಿನ್ನದೆ ಬಿಟ್ಟ ವಸ್ತುಗಳು, ಬಾಳೆಹಣ್ಣಿನ ಸಿಪ್ಪೆ ಇತ್ಯಾದಿ ಅನುಪಯುಕ್ತ ವಸ್ತುಗಳನ್ನು ಅದಕ್ಕಾಗಿಯೇ ಇರಿಸಿದ ಡಬ್ಬಕ್ಕೆ ಹಾಕಬೇಕು. ತಟ್ಟೆ ಲೋಟಗಳನ್ನು ತೊಳೆಯಲು ಇಟ್ಟ ತೊಟ್ಟಿಗಳಲ್ಲಿ ಇಡಬೇಕು. ಕೈತೊಳೆಯಲು ನಲ್ಲಿಯ ವ್ಯವಸ್ಥೆ ಇದೆ. ಆಶ್ರಮದ ಸಾಧಕರು ತಟ್ಟೆ ಲೋಟಗಳನ್ನು ಶುಭ್ರವಾಗಿ ತೊಳೆದು, ಕುದಿಯುವ ನೀರಿನಲ್ಲಿ ಅದ್ದಿ ಶುಚಿಯಾದ ಬಟ್ಟೆಯಲ್ಲಿ ಒರೆಸಿ ಸ್ವಸ್ಥಾನದಲ್ಲಿ ಇಡುತ್ತಾರೆ. ಎಲ್ಲ ಕಾರ್ಯದಲ್ಲಿಯೂ ಶುಚಿತ್ವಕ್ಕೆ ಪ್ರಥಮಸ್ಥಾನ.

ಆಶ್ರಮಕ್ಕೆ ಬೇಕಾದ ತರಕಾರಿ, ಬಾಳೆಹಣ್ಣು, ಲಿಂಬೆಹಣ್ಣು,

ಇವೆಲ್ಲವನ್ನು ಆಶ್ರಮದ ತೋಟದಲ್ಲಿಯೆ ಬೆಳೆಯುತ್ತಾರೆ. ಆಶ್ರಮಕ್ಕೆ ಸೇರಿದ ಗೋಶಾಲೆಯಿಂದ ಸಾಕಷ್ಟು ಹಾಲು ದೊರಕುತ್ತದೆ.

ಪುಸ್ತಕ ಪ್ರಕಟಣಶಾಲೆ, ಪುಸ್ತಕಭಂಡಾರ, ಶಾಲೆಗಳು, ಅತಿಥಿಗೃಹ, ಯಾಂತ್ರಿಕ ಶಿಕ್ಷಣ ಶಾಲೆ, ವೃತ್ತಿಶಿಕ್ಷಣ ಶಾಲೆಗಳು, ಶ್ರೀ ಅರವಿಂದ ಅಂತರ ರಾಷ್ಟ್ರೀಯ ವಿದ್ಯಾಕೇಂದ್ರ–ಇವೆಲ್ಲ ಆಶ್ರಮದ ನೇತೃತ್ವದಲ್ಲಿ ಯಶಸ್ವಿಯಾಗಿ ನಡೆಯುತ್ತಿವೆ. ಎಲ್ಲಿ ನೋಡಿದರೂ ಉತ್ತಮ ವ್ಯವಸ್ಥೆ ಕಾಣಿಸುತ್ತದೆ. ಆಶ್ರಮಕ್ಕೆ ಸೇರಿದ ರಂಗಮಂದಿರ ಸುಮಾರು ಎರಡುಸಾವಿರ ಜನರು ಕುಳಿತು ನೋಡುವಷ್ಟು ವಿಶಾಲವೂ ಭವ್ಯವೂ ಆಗಿದೆ. ಈ ರಂಗಮಂದಿರದಲ್ಲಿ ಆಶ್ರಮದ ಬಾಲಕ ಬಾಲಕಿಯರೂ ಸಾಧಕರೂ ವರ್ಷಕ್ಕೆ ಕೆಲವು ಬಾರಿ ಉತ್ತಮ ನಾಟಕಗಳನ್ನು ಅಭಿನಯಿಸಿ ತೋರುತ್ತಾರೆ.

ದೈಹಿಕ ಮಾನಸಿಕ ಆಧ್ಯಾತ್ಮಿಕ ಪ್ರಗತಿಗಾಗಿ ಆಶ್ರಮವು ಸಕಲ ಸೌಕರ್ಯಗಳನ್ನು ನೀಡಲು ಸರ್ವ ಪ್ರಯತ್ನಗಳನ್ನೂ ಮಾಡುತ್ತಿದೆ. ಆಶ್ರಮದಲ್ಲಿರುವವರೆಲ್ಲರೂ ಸಿದ್ಧರಲ್ಲ. ಅವರೆ ಪೂರ್ಣಯೋಗದ ಸಾಧನೆಗಾಗಿ ತೊಡಗಿರುವ ಸಾಧಕರು.

## ೮. ಉಪಸಂಹಾರ

ಶ್ರೀ ಅರವಿಂದರು ಚಿಕ್ಕವಯಸ್ಸಿನಲ್ಲಿಯೆ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದರು. ಅವರು ಮನಸ್ಸು ಮಾಡಿದ್ದರೆ ಅಧಿಕಾರ, ಸಂಪತ್ತು, ಅವರ ಕೈವಶವಾಗುತ್ತಿತ್ತು. ಆದರೆ ಅವರು ಭಾರತೀಯ ಸಂಸ್ಕೃತಿಯ ಹಿರಿಮೆಯನ್ನರಿತು ಯೋಗಮಾರ್ಗದಲ್ಲಿ ಸಾಧಕರಾದರು. ಮೊದಲು ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಸೇವೆ ಸಲ್ಲಿಸಿ, ಕಡೆಗೆ ಭಾರತ ಹಾಗೂ

ಪ್ರಪಂಚದ ಅಭ್ಯುದಯಕ್ಕಾಗಿ ಪಾಂಡಿಚೇರಿಯ ಪುಣ್ಯಾಶ್ರಮದಲ್ಲಿ ಯೋಗಸಾಧಕರಾಗಿ ಸಿದ್ಧಿ ಪಡೆದು ಆಧ್ಯಾತ್ಮಿಕಶಕ್ತಿ ತರಂಗಗಳನ್ನು ಪ್ರಪಂಚದ ಮೇಲೆ ಹರಿಸಿದರು.

ಭೂತ ಭವಿಷ್ಯದ್ ವರ್ತಮಾನಗಳನ್ನು ಅರಿತ ಶ್ರೀ ಅರವಿಂದರು ಪ್ರಪಂಚದ ಮಾನವರು ಮುಂದೆ ದೇವಮಾನವರಾಗುವರೆಂದು ನುಡಿದಿದ್ದಾರೆ. ಭಗವಂತನಿಂದ ಬಂದ ಈ ಜಗತ್ತು ಪುನಃ ಭಗವಂತನತ್ತಲೇ ಸಾಗುತ್ತದೆ. ಮಾನವ, ಅಹಂಕಾರ ಮೂಲವಾದ ಪ್ರಜ್ಞೆಯನ್ನು ದೈವೀ ರೀತಿಯಲ್ಲಿ ಪರಿವರ್ತಿಸುವುದೇ ಅಭ್ಯುದಯದ ಬುನಾದಿ. ಸಮಾಜದ ಮೇಲ್ಮೆಗಾಗಿಯೇ ಪ್ರಜಾಪ್ರಭುತ್ವ, ಲೋಕಸತ್ತಾತ್ಮಕ ರಾಜ್ಯ, ಸಮತಾ ರಾಜ್ಯ ಇವುಗಳ ಸ್ಥಾಪನೆಗಾಗಿ ಅನವರತ ಪ್ರಯತ್ನ ಪ್ರಪಂಚದಲ್ಲಿ ನಡೆದಿದೆ. ಈ ರೀತಿಯ ಬಾಹ್ಯ ವಿಧಾನಗಳಿಂದಲೇ ಮಾನವನ ಮೂಲಭೂತವಾದ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಅಹಂಕಾರ ನಿರಸನದಿಂದ ಆರಂಭವಾಗುವ ಸಾಧನೆಯಿಂದ ಎಲ್ಲ ಮಾನವ ಕಾರ್ಯಗಳಿಗೂ ಹೊಸ ಶಕ್ತಿ ಬರುತ್ತದೆ; ಲೋಕದಲ್ಲಿ ಶಾಂತಿ ನೆಲಸುತ್ತದೆ.

ಇಂದು ಭಾರತ ತನ್ನ ಬೃಹತ್ತರ ಯೋಜನೆಗಳಿಗೆ ಕೋಟಿ ಕೋಟಿ ರೂಪಾಯಿಗಳನ್ನು ಸುರಿದಿದೆ. ಅಪಾರ ಹಣವನ್ನು ಸುರಿದು ಕಟ್ಟಿದ ಅನೇಕ ಅಣೆಕಟ್ಟುಗಳು, ಬಿರುಕು ಬಿಟ್ಟಿರುವುದನ್ನು ವೃತ್ತಾಂತ ಪತ್ರಿಕೆಗಳಲ್ಲಿ ಓದಿದ್ದೇವೆ. ಇದಕ್ಕೆ ಕಾರಣವೇನು? ರಾಷ್ಟ್ರಪ್ರೇಮದ ಅಭಾವ ಹಾಗೂ ಶ್ರದ್ಧೆಯ ಲೋಪ. ಹೃದಯ ಪರಿವರ್ತನೆಯಾಗದೆ ಎಷ್ಟು ವಿದ್ಯಾಭ್ಯಾಸ ಮಾಡಿದರೇನು? ಎಷ್ಟು ಪದವಿಗಳನ್ನು ಪಡೆದರೆ ಏನು? ಭಾವಶುದ್ಧಿಯಿಲ್ಲದೆ ಕೈಗೊಳ್ಳುವ ಯೋಜನೆಗಳು ಕಡೆಗೆ ವ್ಯರ್ಥವಾಗುತ್ತವೆ. ರಾಷ್ಟ್ರದ ಎಲ್ಲ ಕ್ಷೇತ್ರದಲ್ಲಿಯೂ ಹೃದಯ ಪರಿವರ್ತನೆಯಾಗಬೇಕು.

ಮನುಷ್ಯನ ಹೊಟ್ಟೆಗೆ ಬಟ್ಟೆಗೆ ಸಿಕ್ಕಿದರೆ ಸಾಲದು. ಅವನ ಆತ್ಮದ ವಿಕಾಸವಾಗಬೇಕು. ಇಂದು ಬೇಕಾಗಿರುವುದು ಆತ್ಮಶಕ್ತಿ, ನಿಷ್ಠಾವಂತ ಪ್ರಾಮಾಣಿಕ ಜೀವನ. ಅದರಿಂದಲೆ ಸಮಷ್ಟಿಯ ಉದ್ಧಾರ. ಶ್ರೀ ಅರವಿಂದರ ದೃಷ್ಟಿಯಲ್ಲಿ ಅತಿಮಾನವ, ದೈವೀ ಶಕ್ತಿಯ ಪ್ರತಿನಿಧಿ; ಜರ್ಮನ್ ತತ್ತ್ವಜ್ಞಾನಿ ನಿಟ್ಸೆ ಹೇಳುವ ಅತಿಮಾನವನಂತೆ ಆಸುರೀಶಕ್ತಿಯ ಪ್ರತಿನಿಧಿಯಲ್ಲ. ಶ್ರೀ ಅರವಿಂದರು ಅತಿಮಾನವನಿಂದಲೆ ಜಗತ್ತಿನಲ್ಲಿ ಚಿರಶಾಂತಿಯ ಸ್ಥಾಪನೆ, ಅವನಿಂದಲೆ ಪ್ರಪಂಚದ ಉದ್ಧಾರ ಎಂದು ಘೋಷಿಸಿದ್ದಾರೆ.

ಲೋಕದಲ್ಲಿ ಇದುವರೆಗೆ ಉದಿಸಿದ ಮಹಾತ್ಮರೆಲ್ಲ ದೈವೀಶಕ್ತಿ ಪ್ರಪಂಚದಲ್ಲಿ ವಿಕಾಸವಾಗಲು ಶ್ರಮಿಸಿದ್ದಾರೆ. ಶ್ರೀ ಅರವಿಂದರು ಹಿಂದಿನ ಮಹಾತ್ಮರೆಲ್ಲರ ತಾತ್ತ್ವಿಕ ವಿಚಾರಧಾರೆಗಳನ್ನು ವಿಮರ್ಶಿಸಿ ಮಹತ್ವಪೂರ್ಣ ಪೂರ್ಣಯೋಗ ಮಾರ್ಗವನ್ನು ಜನತೆಯ ಮುಂದೆ ಇಟ್ಟಿದ್ದಾರೆ. ಈ ಯೋಗಸಾಧನೆಯಲ್ಲಿ ಯಾರು ಬೇಕಾದರೂ ಮಗ್ನರಾಗಬಹುದು. ಯೋಗ ಕೇವಲ ಆತ್ಮಸಾಕ್ಷಾತ್ಕಾರಕ್ಕಾಗಿಯಲ್ಲ, ಅದು ಸಮಷ್ಟಿಯ ಉದ್ಧಾರಕ್ಕೆ ಎಂಬುದನ್ನು ಶ್ರೀ ಅರವಿಂದರು ಸ್ಪಷ್ಟಪಡಿಸಿದ್ದಾರೆ.

ಕೆ.ಸಂ. ೨೫೦೩೨—[illegible]—೧೦,೦೦೦ [illegible]—[illegible]

## ಶ್ರೀ ಅರವಿಂದರ ಕೆಲವು ಮುಖ್ಯ ಕೃತಿಗಳು

1. On the Veda
2. Hymns to the Mystic Fire
3. Isha Upanishad
4. The Life Divine
5. The Yoga and its objects
6. Bases of Yoga
7. The Synthesis of Yoga
8. On Yoga Vol. II. Tome I and Tome II
9. Letters of Sri Aurobindo (four volumes)
10. Vyasa and Valmiki
11. Kalidasa
12. Collected Poems and Plays
13. Savitri
14. Education
15. Foundation of Indian Culture

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ.ಪಿ. ಕೃಷ್ಣಕುಮಾರ್